


**<u>ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು</u>**

ಕದಳಿ ಮಹಿಳಾ ವೇದಿಕೆ ಮೈಸೂರು : ಜಿ.ಹೆಚ್. ಗುರುಬಸಪ್ಪ ದತ್ತಿ ಮತ್ತು ಪ್ರಾಚಾರ್ಯ ಎಸ್.ಬಿ ಬೆಟ್ಟಲಿಂಗಯ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ,
ದಿನಾಂಕ: ೧೬.೦೧.೨೦೨೧
ವೇದಿಕೆಯಲ್ಲಿ: ಶಾರದ ಶಿವಲಿಂಗಸ್ವಾಮಿ, ಡಾ.ಜ್ಯೋತಿ ಶಂಕರ್, ನಿರ್ಮಲ ಮಠಪತಿ, ಮ.ಗು. ಸದಾನಂದಯ್ಯ




**<u>ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು</u>**

ದಾವಣಗೆರೆ: ಕದಳಿ ಮಹಿಳಾ ವೇದಿಕೆಯ ೧೨ನೇ ವಾರ್ಷಿಕೋತ್ಸವ
ದಿನಾಂಕ: ೦೫.೦೧.೨೦೨೧
ಕದಳಿಶ್ರೀ ಪ್ರಶಸ್ತಿ ಪುರಸ್ಕೃತರು: ಜಯಮ್ಮ ನೀಲಗುಂದ,
ವೇದಿಕೆಯಲ್ಲಿ: ಸಾವಿತ್ರಮ್ಮ ಸಿದ್ದಪ್ಪ, ಪ್ರಮೀಳಾ ನಟರಾಜ್, ಸುಧಾ ದಿಬ್ದಳ್ಳಿ, ಸುಜಾತ ರವೀಂದ್ರ, ಪಲ್ಲವಿ ಪಾಟೀಲ್



**<u>ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು</u>**

ಹುನಗುಂದ: ಲಿಂ. ಶ್ರೀಮತಿ ಚೆನ್ನಮ್ಮ, ಲಿಂ. ಶ್ರೀ ನೀಲಕಂಠಪ್ಪ ಹಾದಿಮನಿ ಶರಣ ದಂಪತಿಗಳ ಸ್ಮರಣಾರ್ಥ ದತ್ತಿ ಉಪನ್ಯಾಸ.
ದಿನಾಂಕ: ೧೭.೦೧.೨೦೨೧
ವೇದಿಕೆಯಲ್ಲಿ: ಎ.ಎಸ್. ಪಾವಟೆ, ವಿಜಯಲಕ್ಷ್ಮೀ ಮೇಳಿ, ಶಿವಶರಣಪ್ಪ ಶಿರೂರ, ಯಾಳವಾರ, ಡಾ. ನಾಗರಾಜ ನಾಡಗೌಡರ. ಪ್ರೊ ಎಸ್. ಎನ್., ಡಾ. ಎಸ್. ಎನ್. ಹಾದಿಮನಿ

**<u>ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು</u>**

ಬಳ್ಳಾರಿ ಜಿಲ್ಲಾ ಘಟಕ: ಕೆ.ಎಂ. ಗವಿಸಿದ್ಧಯ್ಯ ಸರೋಜಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮ,
ದಿನಾಂಕ: ೩೧.೧೨.೨೦೨೦
ವೇದಿಕೆಯಲ್ಲಿ: ಗಂಗಾಧರ ಪತ್ತಾರ್, ಬಾ. ಕೊಟ್ರೇಶ್, ಡಾ. ವೆಂಕಟಯ್ಯ ಅಪ್ಪಗೆರೆ, ಎ.ಎಂ.ಪಿ. ಸದಾಶಿವ ಮೂರ್ತಿ ಸ್ವಾಮಿ, ಕೆ.ಬಿ. ಸಿದ್ಧಲಿಂಗಪ್ಪ. ಡಾ ಕೊಟ್ರೇಶ್, ಡಾ ವೆಂಕಟಯ್ಯ






# ಮಹಾಮನೆ

ಫೆಬ್ರವರಿ ೨೦೨೧ ಸಂಪುಟ : ೨೩ ಸಂಚಿಕೆ : ೦೭



ಪ್ರಕಾಶಕರು
ಶ್ರೀ ಗೊ.ರು. ಚನ್ನಬಸಪ್ಪ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ
ಜಯನಗರ ೮ನೆಯ ವಿಭಾಗ
ಬೆಂಗಳೂರು - ೫೬೦ ೦೭೦
ದೂ: ೦೮೦ - ೨೨೯೭ ೦೧೨೫
**E-mail:**
mahamanemagazine@gmail.com

## ಸಂಚಿಕೆಯ ಅಂತರಂಗ

ಚಿನ್ನಹ

## ಹೂವು ಹೊರಳುವವು ಸೂರ್ಯನ ಕಡೆಗೆ

ಮೊದಲಗಿತ್ತಿಯಂತೆ ಮೆರೆಯುತಿಹೆ ತಾಯಿ,
ಮೊದಲಗಿತ್ತಿಯಂತೆ ಮೆರೆಯುತಿಹೆ

ಈ ವಸುಂಧರೆಗಿರುವ ಚೈತನ್ಯ ಅದಮ್ಯವಾದುದೆಂದು ಮತ್ತೊಮ್ಮೆ, ಮಗದೊಮ್ಮೆ ಸಾಬೀತಾಗುತ್ತಿದೆ. ಜೀವಜಾಲಗಳೆಲ್ಲ ತತ್ತರಿಸಿ, ತಲ್ಲಣಿಸಿ ಹೋದ ಮೇಲೆ ವಸುಂಧರೆ ನಿಧನಿಧಾನವಾಗಿ ತನ್ನ ಉಗ್ರಸ್ವರೂಪವನ್ನು ಕಡಿಮೆಮಾಡಿಕೊಳ್ಳುತ್ತ ಅವಳ ಎಂದಿನ ಮನಸ್ಥಿತಿಯಾದ ಮಂದಹಾಸಕ್ಕೆ ಮರಳುತ್ತಿರುವಂತೆ ಕಾಣುತ್ತಿದೆ. ಬದುಕು ಮತ್ತೆಂದೂ ಹಿಂದಿನ ಸ್ಥಿತಿಗೆ ಮರಳಲಾರದೇನೋ ಎನ್ನುವಷ್ಟು ಆಘಾತಕ್ಕೊಳಗಾಗಿದ್ದ ಹುಲುಮಾನವರು ಬದುಕಿನಲ್ಲಿ ಇನ್ನೂ ಬಾಕಿ ಉಳಿದಿದೆ ಎನ್ನುವ ಭರವಸೆಗೆ, ಸಮಾಧಾನಕ್ಕೆ ಮರಳುತ್ತಿದ್ದಾರೆ. ಆದರೆ, ಈ ಮರುಪ್ರಯಾಣವು ಅರಿವಿನ ಪ್ರಯಾಣವಾದರೆ ಮಾತ್ರ ಭವಿಷ್ಯವಿದೆ. ಇಲ್ಲವಾದಲ್ಲಿ ಇನ್ನೂ ಘನಘೋರವಾದ ಅಗ್ನಿಪರೀಕ್ಷೆಗಳು ಮನುಕುಲಕ್ಕೆ ಕಾದಿವೆ.

ಕೊರೋನಾ ಪಾಠಗಳು ಇನ್ನೂ ಮುಂದುವರೆದಿವೆ ಎನ್ನುವುದೂ ಅಷ್ಟೇ ನಿಜ. ಮನುಷ್ಯರ ಆದ್ಯತೆಗಳು ಬುಡಮೇಲಾಗಬೇಕಾದ ಅನಿವಾರ್ಯತೆ ನಮ್ಮೆದುರಿಗಿದೆ. ಮೇಲ್ನೋಟಕ್ಕೆ ಇದೊಂದು ಕರಾಳ ವಾಸ್ತವದಂತೆ ಕಾಣಿಸುತ್ತದೆ. 'ಭವನಿಮಜ್ಜನ ಚಾತುರ್ಯ'ದಲ್ಲಿ ದಿನದಿನಕ್ಕೂ ಪರಿಣಿತರಾಗುತ್ತಲೇ ಹೋಗುತ್ತಿರುವ ನಾವು 'ಲಘಿಮಾ ಕೌಶಲ'ವನ್ನೂ ಕಲಿಯಬೇಕಾಗಿದೆ. ಬಿಟ್ಟುಕೊಡುವುದನ್ನೂ, ಹಂಚಿ ತಿನ್ನುವುದನ್ನೂ, ಅಲ್ಪತೃಪ್ತರಾಗುವುದನ್ನೂ ಕಲಿಯದಿದ್ದರೆ, ಉಳಿಗಾಲವಿಲ್ಲ. ಜೆ.ಸಿ. ಕುಮಾರಪ್ಪನವರ 'ಶಾಶ್ವತ ಅರ್ಥಶಾಸ್ತ್ರ' ನೆನಪಾಗುತ್ತಿದೆ. ಮನುಷ್ಯರು ಮೂಲಭೂತ ಅವಶ್ಯಕತೆಗಳನ್ನು ಮೂಲಭೂತ ನೆಲೆಯಲ್ಲಿಯೇ ಉಳಿಸಿಕೊಳ್ಳದಿದ್ದರೆ ಜಗತ್ತು ಅದೆಂಥ ರಾಕ್ಷಸರ ನಾಡಾಗಬಹುದು? ಎನ್ನುವುದನ್ನು ಹೇಳುತ್ತಲೇ ಈ ಕೃತಿ ನಿಜಕ್ಕೂ ಮನುಷ್ಯರಿಗೆ ಬೇಕಾಗಿರುವುದು ಎಷ್ಟೋ ಅಷ್ಟನ್ನು ಮಾತ್ರ ಪಡೆದು, ಅದರಲ್ಲೇ ಅಸೀಮ ತೃಪ್ತಿಯನ್ನು ಪಡೆಯುವುದು ಹೇಗೆನ್ನುವುದನ್ನು ತಿಳಿಯಾಗಿ ಆದರೆ, ಘನವಾಗಿ ಹೇಳುತ್ತದೆ. ಹಾಗೆ ನೋಡಿದರೆ ಜಗತ್ತಿನ ಎಲ್ಲ ದಾರ್ಶನಿಕರು, ತಾತ್ವಿಕರು ಹೇಳುವುದು ಇದನ್ನೇ. ಬಸವ, ಬುದ್ಧ, ಮಹಾವೀರ, ಎಲ್ಲರೂ 'ಅಪರಿಗ್ರಹ'ವನ್ನು ಶಾಪ, ಪಾಪ ಎಂದೇ ಕರೆಯುತ್ತಾರೆ.

ಈ ಬಾರಿಯ ಮುಖಪುಟವು ಪ್ರಕೃತಿಯ ನವನವೋನ್ಮೇಶ ಶಾಲೆಯಾದ ಸೃಷ್ಟಿಗುಣವನ್ನು ಧ್ವನಿಸುತ್ತಿದೆ. ಅದರ ಹೂಗಳ ತಿಳಿಗುಲಾಬಿ ಬಣ್ಣವು ಜೀವನಪ್ರೀತಿಯ ಸಂಕೇತವೂ ಆಗಿದೆ. ಬದುಕಿನ ಸೌಂದರ್ಯದ ಪ್ರತಿನಿಧಿಯೇ ಎಂಬಂತಿದೆ. ಲೋಕ ಬದುಕಿಗೆ ಮರುಳುತ್ತಿರುವಾಗ ಇದೊಂದು ಸ್ವಾಗತ ಗೀತೆಯಂತೆ ತೋರುತ್ತದೆ. ಮುಖಪುಟವನ್ನು ರಚಿಸಿಕೊಟ್ಟ ಶ್ರೀಮತಿ ಯಜ್ಞೇಶ್ವರಿ ಎಂ. ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿದ್ದಾರೆ. ಶ್ರೀ ಗೊ.ರು. ಚನ್ನಬಸಪ್ಪ, ಡಾ.ಬಿ. ನಂಜುಂಡಸ್ವಾಮಿ, ವೆಂಕಟೇಶ ಕೆ. ಜನಾದ್ರಿ, ಚಿಕ್ಕೋಳ್ ಈಶ್ವರಪ್ಪ, ಎಂ. ಚೆನ್ನನಾಗರಾಜ್, ಆದಪ್ಪ ಮಲ್ಲಪ್ಪ ಗೊರಚಿಕ್ಕನವರ, ಡಾ. ಶಿವಾನಂದ ಬ. ಟವಳಿ, ಬಿದರಹಳ್ಳಿ ನರಸಿಂಹಮೂರ್ತಿ, ಪ್ರೊ. ಅಮರೇಶ ನುಗಡೋಣಿ, ಪ್ರೊ. ಓ.ಎಲ್. ನಾಗಭೂಷಣಸ್ವಾಮಿ, ಸಿ.ಪಿ. ನಾಗರಾಜ, ಡಾ.ಕೆ.ಎಸ್. ಶಾಲಿನಿ, ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ, ಪ್ರಾ. ಆರ್.ಎಸ್. ಲೆಕ್ಕದ, ಜಿ.ಹೆಚ್. ಹನ್ನೆರಡುಮಠ ಅವರು ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಕೃತಜ್ಞತೆಗಳು.

**ಡಾ. ಎಂ.ಎಸ್. ಆಶಾದೇವಿ**

ಸಂಪಾದಕರು



## ಅಧ್ಯಕ್ಷರ ನುಡಿ

ನಮ್ಮ ಬದುಕನ್ನು ಹೇಗೆ ಸಾರ್ಥಕಗೊಳಿಸಿಕೊಳ್ಳಬೇಕೆಂದು ಹೇಳಿ, ಶರಣರು ನಡೆದು ತೋರಿದ ಶರಣ ಮಾರ್ಗ, ನಮಗೆ ಅದುವೇ ರಾಜಮಾರ್ಗ. ಸಮಾಜ ೧೨ನೆಯ ಶತಮಾನದಲ್ಲಿ, ಬಸವಾದಿ ಶರಣರು ಬರುವುದಕ್ಕೆ ಮುಂಚೆ ಯಾವ ಸ್ಥಿತಿಯಲ್ಲಿತ್ತೋ, ಇಂದು ೨೧ನೆಯ ಶತಮಾನದಲ್ಲಿ ಅದಕ್ಕಿಂತ ಹೀನಾಯ ಸ್ಥಿತಿಯಲ್ಲಿದೆ. ಇಂಥ ಸಮಾಜವನ್ನು ಬದಲಾಯಿಸಲು ಮತ್ತೆ ಬಸವಾದಿ ಶರಣರು ಹುಟ್ಟಿ ಬರಬೇಕೇ? ಅವರು ಬರುವಿಕೆಗಾಗಿ ನಾವು ಕಾದು ಕುಳಿತಿರಬೇಕೇ? ನಮ್ಮಲ್ಲಿಯೇ ಕೆಲವರು ಬಸವಣ್ಣ, ಚೆನ್ನಯ್ಯ, ಸತ್ಯಕ್ಕ, ಚೌಡಯ್ಯ, ಗುಂಡಯ್ಯ, ಚಂದಯ್ಯಗಳೇಕೆ ಆಗಬಾರದು? ಆಗಲು ಸಾಧ್ಯವಿಲ್ಲವೇ? ಯಾವ ಶಿವಶರಣ ಶರಣೆಯರೂ ಅವತಾರಿ ವ್ಯಕ್ತಿಗಳಲ್ಲ; ದೇವಲೋಕದಿಂದ ಬಂದವರಲ್ಲ. ನಮ್ಮ ನಿಮ್ಮಂತೆ ಇದೇ ಭೂಮಿಯಲ್ಲಿ ತಾಯಿ-ತಂದೆಯರಿಂದ ಹುಟ್ಟಿ, ಇದೇ ಜಲವ ಕುಡಿದು ಇದ್ದವರು, ಬೆಳೆದವರು. ತಮ್ಮ ವೈಯಕ್ತಿಕ ಸಾಧನೆಯಿಂದ, ಅನುಭವದಿಂದ ಒಂದೊಂದೇ ಮೆಟ್ಟಿಲನ್ನು ಹತ್ತಿ ಶರಣರಾದವರು. ಅವರಲ್ಲಿ ಕೆಲವು ಶರಣರು ಅಲ್ಲಮಪ್ರಭು, ಅಕ್ಕಮಹಾದೇವಿ, ಚೆನ್ನಬಸವಣ್ಣ, ಬಸವಣ್ಣ ಮುಂತಾದವರು ತಮ್ಮ ಅನುಭವದಿಂದ ಒಬ್ಬರೊಬ್ಬರ ಸತ್ಸಂಗದಿಂದ ಬೆಳೆದು, ಉಳಿದವರಿಗೆ ದಾರಿದೀಪವಾದರು.

ಈಗ ನಮಗೆ ಅವರು ನಡೆದು-ನುಡಿದ ಅನುಭವ ಎಂಬ ಅಮೃತದಲ್ಲಿ ಅದ್ದಿ ತೆಗೆದ ಇಡೀ ವಚನ ಸಾಹಿತ್ಯ ನಮಗೆ ದಾರಿದೀಪವಾಗಿದೆ. ವಚನ ಸಾಹಿತ್ಯವನ್ನು ಅಧ್ಯಯನ ಮಾಡಿ ನಮ್ಮ ಜೀವನದ ಒರೆಗಲ್ಲಿಗೆ ಹಚ್ಚಿ, ಆರೋಗ್ಯವಂತ ಸಮಾಜ ನಿರ್ಮಾಣಕ್ಕೆ ಅವಶ್ಯಕ ಪರಿಕರಗಳನ್ನು ಜೋಡಿಸಿಕೊಂಡು, ಅದಕ್ಕೆ ತಕ್ಕಂತೆ ನಮ್ಮ ಜೀವನ ಶೈಲಿಯನ್ನು ರೂಪಿಸಿಕೊಂಡು ಮುನ್ನಡೆದರೆ ಅದೇ ಶರಣಮಾರ್ಗವಾಗುತ್ತದೆ, ರಾಜಮಾರ್ಗವಾಗುತ್ತದೆ; ಜನಮಾರ್ಗವಾಗುತ್ತದೆ.

ಇಂಥ ಶರಣ ಮಾರ್ಗದಲ್ಲಿ ಹಿಂಸೆಗೆ ಅವಕಾಶವಿಲ್ಲ, ವಂಚನೆಗೆ ಆಸ್ಪದವಿಲ್ಲ, ಸದಾಸೆಗೆ ಮಾತ್ರ ಸ್ಥಾನ. ನಿಸ್ವಾರ್ಥ ಬಂದಾಗ ಸ್ವಾರ್ಥಕ್ಕೆಡೆ ಇಲ್ಲ; ಪ್ರೀತಿ-ವಿಶ್ವಾಸಗಳು ಬಂದಾಗ ಆಡಂಬರ-ಮೂಢಾಚರಣೆಗಳಿಗೆ ಜಾಗವೇ ಇರುವುದಿಲ್ಲ. ಪ್ರೀತಿ-ವಿಶ್ವಾಸ-ನಂಬಿಕೆಗಳೇ ದೇವರಾದಾಗ ಬೇರೆ ದೇವರುಗಳಿಗೆ ಸ್ಥಾನವೇ ಇರುವುದಿಲ್ಲ.

೧೨ನೆಯ ಶತಮಾನದಲ್ಲಿ ಶರಣಮಾರ್ಗ, ಅದು ಈಗ ೨೧ನೆಯ ಶತಮಾನದಲ್ಲಿ ಜನಮಾರ್ಗವಾಗಬೇಕಾದರೆ ಜನ ಸಮೂಹವೇ ಶರಣ ಸಮೂಹವಾಗುವುದು ಅವಶ್ಯಕವಾಗಿದೆ. ಅದಕ್ಕೆ ವಚನ ಸಾಹಿತ್ಯವೇ ದಾರಿದೀಪ. ಆ ಬೆಳಕಿನಲ್ಲಿ ನಡೆದುದೇ ರಾಜಮಾರ್ಗ.

– ಅಪ್ಪಾರಾವ ಅಕ್ಕೋಣೆ

# ಬಯಲ ಭ್ರಮೆ!

ಶ್ರೀ ಗೊ.ರು. ಚನ್ನಬಸಪ್ಪ
೪೦೬, 'ಪ್ರಣಾಮ' ೩ನೇ ಕ್ರಾಸ್, 'ಎಫ್' ರಸ್ತೆ,
ಐಡಿಯಲ್ ಹೋಮ್ಸ್ ಟೌನ್‌ಶಿಪ್, ೨ನೇ ಹಂತ
ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦ ೦೯೮
ಮೊ: ೯೯೮೦೫ ೧೨೩೮೯

ವಸ್ತುಗಳು ಮತ್ತು ಘಟನೆಗಳು ಪರಸ್ಪರವಾಗಿ ಹೊಂದಿರುವ, ತುದಿ ಮೊದಲಿಲ್ಲದ ವಿಸ್ತಾರವೇ ಬಯಲು. ಇದು ಕ್ರಿಸ್ತಪೂರ್ವದಿಂದ ಇದುವರೆಗೆ ನಡೆದಿರುವ ಭೌತವಿಜ್ಞಾನದ ಶೋಧಾರ್ಥ. ಇದರಲ್ಲೂ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ.

ವಿಶ್ವದ ಸೃಷ್ಟಿ, ಸ್ವರೂಪ ಮತ್ತು ಅದನ್ನು ಸುತ್ತಿಕೊಂಡಿರುವ ಬಯಲನ್ನು ಕುರಿತಂತೆ ಪ್ಲೇಟೋ, ಅರಿಸ್ಟಾಟಲ್, ಸಾಕ್ರಟೀಸ್, ಗೆಲಿಲಿಯೋ ಮೊದಲಾದ ಪ್ರಾಚೀನರಿಂದ ಹಿಡಿದು ಆಧುನಿಕ ಐಸಾಕ್ ನ್ಯೂಟನ್, ಆಲ್ಬರ್ಟ್ ಐನ್‌ಸ್ಟೀನ್, ಹೋಮಿಯೋ ಬಾಬಾ ಮೊದಲಾದ ಭೌತಶಾಸ್ತ್ರ ವಿಜ್ಞಾನಿಗಳವರೆಗೆ ಚರ್ಚೆ ನಡೆಯುತ್ತಲೇ ಬಂದಿದೆ. ಈಗಲೂ ನಡೆಯುತ್ತಲೇ ಇದೆ.

ಭೌತವಿಜ್ಞಾನವು 'ಬಯಲು' ಎನ್ನುವುದು ವಿಶ್ವಸೃಷ್ಟಿಯ ಮಹಾಸ್ಫೋಟ(Big Bang) ದಿಂದ ಉಂಟಾಯಿತೆಂದು ಹೇಳುತ್ತದೆ. ಆದರೆ, ಆ ಮಹಾಸ್ಫೋಟಕ್ಕೆ ಮುನ್ನ ಆ ಬಯಲು ಎಲ್ಲಿತ್ತು ಎಂಬುದನ್ನು ಹೇಳಲು ವಿಜ್ಞಾನಕ್ಕೆ ಇನ್ನೂ ಸಾಧ್ಯವಾಗಿಲ್ಲ. ಆದರೂ ಬಯಲಿನ ಉದ್ದಗಲ, ಆಳ-ಎತ್ತರಗಳನ್ನು ಅಳೆಯುವ ಪ್ರಯತ್ನವೂ ನಿಂತಿಲ್ಲ!

ಆದರೆ, 'ಬಯಲು' ಎನ್ನುವುದು ಭೌತವಿಜ್ಞಾನದ ಯಾವ ಅಳತೆ-ಅಂದಾಜುಗಳಿಗೂ ನಿಲುಕದ್ದು ಎಂದು ಹೇಳುವ ಇನ್ನೊಂದು ವಿಜ್ಞಾನವಿದೆ. ಅದು ಆಧ್ಯಾತ್ಮದ ಅನುಭಾವಜ್ಞಾನ. ಅದು ಅಳೆಯಲಾಗದ 'ಅನಂತ' ಎಂಬುದನ್ನು ಬಯಲುಮಾಡಿದ ಆಧ್ಯಾತ್ಮವಿಜ್ಞಾನಿ ಎಂದರೆ, ೧೨ನೆಯ ಶತಮಾನದಲ್ಲಿ ಆಗಿಹೋದ ಮಹಾನುಭಾವಿ ಅಲ್ಲಮಪ್ರಭು.

ಬಯಲನ್ನು ಭೌಗೋಳಿಕವಾಗಿ, ಸಮಾಜವಿಜ್ಞಾನವಾಗಿ, ಸೃಷ್ಟಿಶಾಸ್ತ್ರೀಯವಾಗಿ, ಭೌತಶಾಸ್ತ್ರೀಯವಾಗಿ, ಅಂಕಗಣಿತ-ರೇಖಾಗಣಿತವಾಗಿ ಭೌತವಿಜ್ಞಾನಿಗಳು ಪರಿಗಣಿಸಿದ್ದರೆ, ಅಲ್ಲಮಪ್ರಭು ಅದನ್ನು ಆಧ್ಯಾತ್ಮಿಕ ಅನುಭವವಾಗಿ ಅದರ ಅದ್ಭುತವನ್ನು ತಿಳಿಸುತ್ತಾನೆ.

ವಿಜ್ಞಾನಿಗಳು ಮತ್ತು ನಿಘಂಟುಕಾರರು ಹೇಳುವ ಬಯಲೆಂದರೆ ಮೈದಾನ, ನೆಲ, ಭೂಮಿ, ಶೂನ್ಯ, ವಿಶಾಲವಾದ ಪ್ರದೇಶ, ಸಾವು ಇತ್ಯಾದಿ. ಆದರೆ, ಅಲ್ಲಮ ಹೇಳುವ ಬಯಲು ಇದೊಂದೂ ಅಲ್ಲ. ಅವನು ಹೇಳುವ ಬಯಲಿಗೆ ಆಕಾರವೇ ಇಲ್ಲ. ಹಾಗಾಗಿ ಅದಕ್ಕೆ ಉದ್ದವೂ ಇಲ್ಲ; ಅಗಲವೂ ಇಲ್ಲ, ಆಳವೂ ಇಲ್ಲ; ಎತ್ತರವೂ ಇಲ್ಲ. ಅದು 'ಬಟ್ಟೆ ಬರಿಯ ಬಯಲು' ಅಷ್ಟೆ!

ಅಲ್ಲಮನ ಈ ಅನುಭಾವದ ವಿಜ್ಞಾನವನ್ನು ಪರಿಚಯಮಾಡಿಕೊಳ್ಳಲು ನಮಗಿರುವ ಆಧಾರ-ಆಕರಗಳೆಂದರೆ ಅವನೇ ಹೇಳಿರುವ ವಚನಗಳು. ಸಮಗ್ರ ವಚನಸಂಪುಟದಲ್ಲಿ ಪ್ರಕಟವಾಗಿರುವ ಅವನ ೧೬೩೬ ವಚನಗಳಲ್ಲಿ ೧೦೮ ಕಡೆ 'ಬಯಲು' ಶಬ್ದದ ನೇರ ಬಳಕೆಯಾಗಿದ್ದರೆ, ಬಹುಪಾಲು ವಚನಗಳಲ್ಲಿ ಪರ್ಯಾಯವಾಗಿ ಬಯಲನ್ನು ಕುರಿತೇ ಹೇಳುತ್ತಾನೆ. ಬಯಲು ಶಬ್ದಕ್ಕೆ ಅಲ್ಲಮನೇ ಅರ್ಥ ಎಂದರೂ ಸಲ್ಲುತ್ತದೆ.



ನಾವು ಸಾಮಾನ್ಯವಾಗಿ ನಮ್ಮ ಸುತ್ತಮುತ್ತ ಕಾಣುವುದನ್ನೇ 'ಬಯಲು' ಎನ್ನುತ್ತೇವೆ. ನಾವು ಕಾಣುವ ಬಯಲಿನಲ್ಲಿ ಗುಡ್ಡ-ಬೆಟ್ಟಗಳಿವೆ; ಹಳ್ಳ-ಕೊಳ್ಳಗಳಿವೆ; ಮರ-ಗಿಡಗಳಿವೆ; ಮಾನವರಾದಿಯಾಗಿ ಕೋಟ್ಯಂತರ ಜೀವರಾಶಿಗಳಿವೆ. ಇವುಗಳ ಅಸ್ತಿತ್ವಕ್ಕೆ ಚಲನ-ವಲನಗಳಿಗೆ ಇರುವ ಅವಕಾಶವೇ ನಮ್ಮ ದೃಷ್ಟಿಯ ಬಯಲು. ಆದರೆ ಅಲ್ಲಮ ಕಂಡ ಬಯಲು ನಮ್ಮ ಕಣ್ಣಿಗೆ ಕಾಣುವಂತಹುದಲ್ಲ. ಅದು ಕೇವಲ ಅನುಭವವೇದ್ಯ.

ಅಲ್ಲಮನ ಪರಿಭಾಷೆಯಲ್ಲಿ 'ಬಯಲು' ಎಂದರೆ ಏನೂ ಇಲ್ಲದ್ದು; ಆದರೆ ಎಲ್ಲವೂ ಇರುವುದು! ಅದು 'ಅಗಮ್ಯ, ಅಗೋಚರ, ನಿರಾಕಾರ, ನಿರ್ವಿಕಾರ'. ಅವನ ಬಯಲು 'ಶಶಿಯಲ್ಲಿ ಕರಗುವುದಿಲ್ಲ; ಬಿಸಿಯಲ್ಲಿ ಸೊರಗುವುದಿಲ್ಲ'. ಅಲ್ಲಮ ಅದನ್ನು 'ರಸವುಂಡ ಹೊನ್ನು' ಎನ್ನುತ್ತಾನೆ. ಯಾವುದೇ ಸಂದು-ಭೇದವಿಲ್ಲದ ಆ 'ಬಯಲನ್ನು ಕಂಡು ಬೆರಗಾದೆ' ಎನ್ನುತ್ತಾನೆ. ಅವನ ಅನುಭವದಲ್ಲಿ ಬಯಲು ಎನ್ನುವುದು 'ನಿತ್ಯವನ್ನು ಅರಿಯುವ, ಭಕ್ತಿಯನ್ನು ಸಾಧಿಸುವ ತಾವು'. ಅದು 'ಸಕಲ ವಿಸ್ತಾರದ ರೂಹು'. ಅದರ ಒಳಗಣ ಒಳಗು, ಹೊರಗಣ ಹೊರಗೆಲ್ಲ ಭಾವ ಬೆತ್ತಲು!.

ಬಹುಶಃ ಬಯಲನ್ನು ಕುರಿತು ಅವನಷ್ಟು ಗಾಢವಾಗಿ ಗಂಭೀರವಾಗಿ ಚಿಂತನೆ ನಡೆಸಿದವರು, ಅವನಷ್ಟು ಅನುಭವಿಸಿದವರು, ಅವನಂತೆ ಬಯಲಾದವರು ಲೋಕದ ಇತಿಹಾಸದಲ್ಲಿ ವಿರಳವೆಂದೇ ಹೇಳಬೇಕು.

ಅಲ್ಲಮನ ಬಯಲಿನಲ್ಲಿ ಕೂಡುವುದಿಲ್ಲ, ಕಳೆಯುವುದಿಲ್ಲ, ಗುಣಿಸುವುದಿಲ್ಲ, ಭಾಗಿಸುವುದೂ ಇಲ್ಲ. ಅದು ಪೂರ್ಣ ಶೂನ್ಯ. ಸೃಷ್ಟಿಯಾದುದೂ ಶೂನ್ಯದಿಂದಲೇ. ಆ ಶೂನ್ಯ ಅಲ್ಲಮನೇ ಹೇಳಿರುವಂತೆ "ಆದಿ ಆಧಾರವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳ-ನಿರಾಳವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು" ಇದ್ದದ್ದು. ಶರಣನ ಉದಯವಾಗುವುದೇ ಶೂನ್ಯದಲ್ಲಿ ಎನ್ನುವ ಅಲ್ಲಮ, ತಾನು ಕಂಡ ಬಯಲನ್ನು "ಶಿಲೆಯೊಳಗಣ ಪಾವಕ, ಉದಕದೊಳಗಣ ಪ್ರತಿಬಿಂಬ, ಬೀಜದೊಳಗಣ ವೃಕ್ಷ, ಶಬ್ದದೊಳಗಣ ನಿಶ್ಶಬ್ದ" ಎಂದು ಕರೆದು, 'ನೆಲದ ಮರೆಯ ನಿಧಾನವಾಗಿ, ಮುಗಿಲ ಮರೆಯ ಮಿಂಚಾಗಿ, ಬಯಲ ಮರೆಯಲಡಗಿದ ಮರೀಚವಾಗಿ, ಕಂಗಳ ಮರೆಯಲಡಗಿದ ಬೆಳಗಾಗಿರುವ' ಗುಹೇಶ್ವರನೊಂದಿಗೆ ಶರಣನನ್ನು ಸಂಬಂಧಿಸುತ್ತಾನೆ. ಏಕೆಂದರೆ, ಶರಣರೆಲ್ಲರೂ "ಬಯಲಲ್ಲಿ ಹುಟ್ಟಿ, ಬಯಲಲ್ಲಿ ಬೆಳೆದು, ಬಯಲ ಲಿಂಗವ ಧರಿಸಿಕೊಂಡು, ಬಯಲನೇ ಆರಾಧಿಸಿ, ಬಯಲಾಗಿ ಹೋಗಿದ್ದನ್ನು" ಅವನು ಕಂಡಿದ್ದಾನೆ.

ಸೃಷ್ಟಿಪೂರ್ವದ ಪರವಸ್ತುವನ್ನು 'ಶೂನ್ಯ' ಎಂದೇ ಕರೆಯಲಾಗಿದೆ. ಆ ಶೂನ್ಯದಲ್ಲಿ ಮತ್ತೆ ಒಂದಾಗುವುದೇ ಜೀವದ ಗುರಿಯಾಗಬೇಕು. ಆ ಒಂದಾಗುವುದನ್ನೇ ಅಲ್ಲಮ 'ಬಯಲಾಗುವುದು' ಎನ್ನುತ್ತಾನೆ. ಎಂದರೆ, ಆ ಪರವಸ್ತುವಿನಲ್ಲಿ ಲೀನವಾಗುವುದು; ಐಕ್ಯವಾಗುವುದು. ಬೌದ್ಧತತ್ತ್ವಜ್ಞಾನಿ ನಾಗಾರ್ಜುನನು ಬೋಧಿಸಿದ ಶೂನ್ಯವಾದಕ್ಕಿಂತ ಅಲ್ಲಮನ ಶೂನ್ಯವಾದ ಹೆಚ್ಚು ಹತ್ತಿರವಾಗುತ್ತದೆ ಎನ್ನಬಹುದು.

ಶೂನ್ಯವಾದ ಅಂತರಂಗದ ಅನುಸಂಧಾನಕ್ಕೆ ಸಂಬಂಧಿಸಿದ್ದು. ಹೊರಗಣ ಬಯಲಿನಂತೆ ಒಳಗಣ ಬಯಲೂ ಇದೆ. ಅನುಭಾವಿಗಳ ಶೋಧ-ಸಾಧನೆಗಳೆಲ್ಲ ಈ ಒಳಗಣ ಬಯಲೇ. ಆ ಪರವಸ್ತುವಿಗೆ (ಗುಹೇಶ್ವರ) "ನೀನು ಬಯಲಾದೆ, ನನ್ನನ್ನೂ ಬಯಲು ಮಾಡು" ಎಂದು ಬಿನ್ನವಿಸಿಕೊಳ್ಳುವ ಅಲ್ಲಮ "ನೆಲನ ಬಿಟ್ಟು ಆಕಾಶದಲ್ಲಿ ನಿಂದು, ಮುಗಿಲೊಳಗೆ ಮಿಂಚಿದ ಒಂದು ಅದ್ಭುತವೇ ಸರಿ".

ಇದನ್ನೆಲ್ಲ ಗಮನಿಸಿದಾಗ, ಭೌತ ವಿಜ್ಞಾನಿಗಳು ಪರಿಗಣಿಸುವ ಬಯಲೇ ಬೇರೆ; ಅಲ್ಲಮನ ಅನುಭಾವದ ಬಯಲೇ ಬೇರೆ. ವಿಜ್ಞಾನಿಗಳ ಬಯಲನ್ನು ಶಬ್ದಗಳಿಂದ ವರ್ಣಿಸಲು ಸಾಧ್ಯವಾಗಬಹುದು. ಆದರೆ ಅಲ್ಲಮನ ಬಯಲನ್ನು ವಿವರಿಸುವುದು ಸಾಮಾನ್ಯವಲ್ಲ. ವಿವರಿಸುತ್ತೇವೆಂದರೆ ಅದು ಕೇವಲ ಬಯಲ ಭ್ರಮೆ! ●

# ಬಿಬ್ಬಿ ಬಾಚಯ್ಯನ ಹೊಸ ವಚನ

**ಡಾ.ಬಿ. ನಂಜುಂಡಸ್ವಾಮಿ**

*ಪಂಡಿತ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ*
*ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್*
*ಬಿ.ಹೆಚ್. ರಸ್ತೆ, ತುಮಕೂರು-೫೭೨೧೦೩.*
*ಮೊ : ೯೮೮೦೯೯೬೧೯೬*

ಹಿರಿಯ ಶರಣ ಬಿಬ್ಬಿ ಬಾಚಯ್ಯ ಪ್ರಸಾದಿಯೆನಿಸಿದ್ದನು. ಗುಲ್ಬರ್ಗಾ ಜಿಲ್ಲೆಯ ಗೊಬ್ಬೂರಿನ ಈ ಬಾಚಯ್ಯ "ಏಣಾಂಕಧರ ಸೋಮೇಶ್ವರ ಲಿಂಗ" ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾನೆ. ಈತನ ವಚನಗಳಲ್ಲಿ ೨೩ ಬೆಡಗಿನ ವಚನಗಳಿವೆ. ಸಮಗ್ರ ವಚನ ಸಂಪುಟ ೮ ಪ್ರಕಟಿತ ವರ್ಷ ೨೦೦೧, ಈ ಸಂಪುಟದ ಸಂಪಾದಕರು ಡಾ. ಬಿ.ಆರ್. ಹಿರೇಮಠ. ಈ ಸಂಪುಟದಲ್ಲಿ ಬಿಬ್ಬಿ ಬಾಚಯ್ಯನ ೧೦೨ ವಚನಗಳು ಪುಟ ೧೧೮-೧೪೯ರಲ್ಲಿ ಮುದ್ರಿಸಿದೆ. ೨೦೧೬ರಲ್ಲಿ ಪ್ರಕಟವಾದ ಬೈಬಲ್ ಆವೃತ್ತಿ ಸಮಗ್ರ ಸಂಪುಟದ ಸಂಪಾದಕರು ಮೈಸೂರಿನ ಡಾ. ವೈ.ಸಿ. ಭಾನುಮತಿ ಅವರು ಬೈಬಲ್ ಮಾದರಿ ಸಂಪುಟದಲ್ಲಿಯೂ ೧೦೨ ವಚನಗಳಿವೆ.

ಮದ್ರಾಸ್ ಇಂದಿನ ಚನ್ನೈ ೩ ನಗರದ Goverment Oriental Manuscript Library ಅಥವಾ G.O.M.L ೧೯೪೬ರಲ್ಲಿ ಪ್ರಕಟವಾದ ಹಸ್ತಪ್ರತಿ ಸೂಚಿ IV ಪುಟ ೮೩೦ರಲ್ಲಿ ನಂ. ೫೦೭ರಲ್ಲಿ ಬಿಬ್ಬಿ ಬಾಚಯ್ಯನ ವಚನಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಸಂಪಾದಕರಾದ ಡಾ. ಶಂಕರನ್ ಎಂ.ಎ., ಪಿ.ಹೆಚ್.ಡಿ., ಅವರು ಬಿಬ್ಬಿ ಬಾಚಯ್ಯನ ಎರಡು ವಚನಗಳನ್ನು ಉಲ್ಲೇಖ ಮಾಡಿದ್ದಾರೆ. ಮೊದಲನೆಯದು "ಓಂಕಾರ ಪ್ರಥಮದಲ್ಲಿ ನಿರಾಲಂಬಮೂರ್ತಿ" ಪ್ರಕಟಿತ ಸಮಗ್ರ ಸಂಪುಟದಲ್ಲಿ ಮೊದಲನೇ ವಚನ. ಮುಂದಿನ ವಚನ ಅರ್ಥಾತ್ ಕಡೆಯದು.

ಎನ್ನಯ..........
**ಹೊಲಬನೆ ಕಂಡು ಶಿಲೆಕುಲದಲ್ಲಿಳಿದು**
**ಅನ್ನ ಅರ್ಪಿತದಲ್ಲಿ ಹಿಂಗಿ ಉದಕ ಮಜ್ಜನದಲ್ಲಿ**
**ಸಂದು ಪ್ರಸಾದ ಪ್ರಸನ್ನದಲ್ಲಿ ಐಕ್ಯವಾಗಿ**
**ಬಿಬ್ಬಿನ ಮನದಲ್ಲಿ ಒಬ್ಬುಳಿಯಾಯಿತ್ತು,**
**ಏಣಾಂಕಧರ ಸೋಮೇಶ್ವರಲಿಂಗ**

**ವಿಶೇಷ ವಿಷಯ:** ಅಸಮಗ್ರ ಶಿಥಿಲ ಗ್ರಂಥಪಾತವಿದೆ. ಲಿಪಿಯು ಸಾಮಾನ್ಯವಾಗಿದೆ. ತಪ್ಪಿಲ್ಲ.

ಇದು ವಚನಗ್ರಂಥವಾಗಿದೆ. ಇದರಲ್ಲಿ ವಚನಸಪ್ತಕವಿದೆ. ಪ್ರತಿಯೊಂದು ವಚನವೂ "ಏಣಾಂಕಧರ ಸೋಮೇಶ್ವರಲಿಂಗ" ಎಂದಂತ್ಯವಾಗುವುದು. ವೀರಶೈವ ಮತಾಚಾರಗಳನ್ನು ಪ್ರತಿಪಾದಿಸುವ ಈ ವಚನಗಳನ್ನು ಬರೆದವನು ಬಿಬ್ಬಿ ಬಾಚಯ್ಯನೆಂಬುವನು.

ಅಂದಿನ ದಿನಮಾನದಲ್ಲಿ ಮೆಕಂಜಿ ಸಂಗ್ರಹಿಸಿದ ೧೦೦೦೦ ವಚನದ ಕಟ್ಟು ಅಥವಾ ೨೦೦೦೦ ವಚನದ ಕಟ್ಟು, ಆ ಕಟ್ಟಿನಲ್ಲಿ ಬಿಬ್ಬಿಬಾಚಯ್ಯನ ಏಳು ವಚನಗಳು ಇದ್ದು ಅದರಲ್ಲಿನ ಒಂದು ವಚನ ಇದುವರೆಗೂ ನಮಗೆ ಸಿಗದೆ ಇರುವಂತಹ ಒಂದು ವಚನ, ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಲಭ್ಯವಾಯಿತು. ತ್ರುಟಿತ ಭಾಗ ಮುಂದೆ ಸಿಕ್ಕಬಹುದು. ಯುವ ವಿದ್ವಾಂಸರು ಪ್ರಕಟಿತ ಸೂಚಿಗಳನ್ನು, ಲಭ್ಯ ಹಸ್ತಪ್ರತಿಗಳನ್ನು ಹದ್ದಿನಕಣ್ಣಿನಿಂದ ನೋಡುತ್ತಾ ಇರಬೇಕು.

●



# ಪ್ರಾಣದಲ್ಲಿ ಮಾಯೆಯಿರಲು ಅದೇತರ ನಿರ್ವಾಣ?

**ಶ್ರೀ ವೆಂಕಟೇಶ ಕೆ. ಜನಾದ್ರಿ**

*ಸಹಾಯಕ ಲೆಕ್ಕಾಧಿಕಾರಿ, ಈಕರ.ಸಾ.ಸಂಸ್ಥೆ,*
*ಕೇಂದ್ರಕಛೇರಿ ಕಲಬುರ್ಗಿ – ೫೮೫ ೧೦೨*
*೯೯೪೫೬ ೩೦೪೯೨*

"ಕಾಯದಲ್ಲಿ ಕಳವಳವಿರಲು, ಪ್ರಾಣದಲ್ಲಿ ಮಾಯೆಯಿರಲು ಏತರ ಮನ, ಇದೇತರ ನಿರ್ವಾಣ? ಮಹಾಲಿಂಗ ತ್ರಿಪುರಾಂತಕನು ನಿನ್ನ ಸಂಹಾರಿಯೆಂಬನಲ್ಲದೇ ಸಜ್ಜನೆಯೆಂದು ಕೈವಿಡಿವನಲ್ಲ ಕೇಳಾ ಮರುಳೆ"

ಎಂದು ಅಕ್ಕಮಹಾದೇವಿಯನ್ನು ಪ್ರಶ್ನಿಸುವ ಮೂಲಕ ಆಕೆಯ ಮಾನಸಿಕ ಸ್ಥಿರತೆಯನ್ನೇ ಪರೀಕ್ಷಿಸುವ ಹೊಣೆಹೊತ್ತ ಶರಣ ಕಿನ್ನರಿ ಬೊಮ್ಮಯ್ಯ ಬಸವಾದಿ ಪ್ರಮಥರಲ್ಲಿಯೇ ಬಹಳ ವಿಶಿಷ್ಟ ಬಗೆಯ ವೈಚಾರಿಕ ಚಿಂತಕನೀತ. ಅಷ್ಟೇ ದಿಟ್ಟ ನಿಲುವಿನ ಶರಣನೀತ. ಈತನ ಈ ಬಗೆಯ ನೇರ ನಡೆ-ನುಡಿಗೆ ಮೆಚ್ಚಿದ ಬಸವಣ್ಣ ಬಸವಕಲ್ಯಾಣದ ಅನುಭವ ಮಂಟಪಕ್ಕೆ ಬರುವ ಹೊಸ ಹೊಸ ಶರಣರನ್ನು ಪರೀಕ್ಷಿಸಿ ಅವರಿಗೆ ಐಡೆಂಟಿಟಿ ಕಾರ್ಡ್‌ನ್ನು ಕೊಡುವ ಹೊಣೆಗಾರಿಕೆಯನ್ನು ವಹಿಸಿದ್ದರು. ಅದಕ್ಕಾಗಿಯೇ ಇರಬೇಕು ಅನುಭವ ಮಂಟಪವೆಂಬುದು ಶರಣ ಶ್ರೇಷ್ಠರ ನೆಲೆಯಾಗಿತ್ತು. ಶರಣರ ಚಿಂತನೆಯ ಅಲೆಗಳ ಅನುಭಾವದ ಆಗರವಾಗಿತ್ತು. ಅನುಭವ ಮಂಟಪ ತನ್ನ ಸ್ಥಾವರತೆಯೊಳಗೇ ಜಂಗಮತ್ವವನ್ನು ಉಸಿರಾಗಿಸಿಕೊಂಡಿತ್ತು. ಇಡೀ ಅನುಭವ ಮಂಟಪದಲ್ಲಿ ಬಯಲಾದ ನುಡಿಗಳೆಲ್ಲವೂ ಅವರ ನಡೆಯಾಗಿದ್ದವು.

ಅಕ್ಕಮಹಾದೇವಿ ಶಿವಮೊಗ್ಗದ ಉಡತಡಿ(ಬಟ್ಟೆ ಉಡುವುದನ್ನು ತಡೆದ ಊರು)ಯಿಂದ ಬಸವಕಲ್ಯಾಣದತ್ತ ಬರುತ್ತಿದ್ದಾಗ ಕಲ್ಬುರ್ಗಿ ಹತ್ತಿರದ ಮಹಾಗಾಂವದಲ್ಲಿ ಒಂದೆರಡು ದಿನ ತಂಗಿ ಬಸವಕಲ್ಯಾಣಕ್ಕೆ ತೆರಳಲಿರುವ ಅಕ್ಕಮಹಾದೇವಿಯನ್ನು ತಡೆದು ಪರೀಕ್ಷಿಸಿದ ಸ್ಥಳ ಒಂದಿದೆ. ಅದುವೇ ಬೀದರ್ ಜಿಲ್ಲೆ ಹುಮ್ನಾಬಾದ್ ತಾಲ್ಲೂಕಿನ ಹಳ್ಳಿಖೇಡದ ಹತ್ತಿರ ಕಿಣ್ಣಿ ಎಂಬ ಗ್ರಾಮವಿದೆ. ಕಿಣ್ಣಿ ಎಂಬುದು ಬೊಮ್ಮಯ್ಯನ ಕಿನ್ನರಿ ಶಬ್ದದಿಂದಲೇ ಪರಿವರ್ತಿತವಾಗಿ ಕಿನ್ನರಿ, ಕಿಣ್ಣರಿ, ಕಿಣ್ಣ, ಕಿಣ್ಣಿಯಾಗಿರಬಹುದೆಂಬುದು ನನ್ನ ಅಂದಾಜು. ಈ ಕಿಣ್ಣಿಯ ಹತ್ತಿರ ಕಿನ್ನರಿ ಬೊಮ್ಮಯ್ಯ ಶರಣರು ಅಕ್ಕಮಹಾದೇವಿಯನ್ನು ತಡೆದು ನಿಲ್ಲಿಸಿ ಆಕೆಯ ವೈರಾಗ್ಯವನ್ನು ಒರೆಹಚ್ಚಿ ನೋಡಬೇಕಾದಾಗ, ಕಿನ್ನರಿ ಬೊಮ್ಮಯ್ಯನಿಗೆ ಆಕೆಯ ಭಕ್ತಿ, ವೈರಾಗ್ಯದ ಕುರಿತಾಗಿ ಮತ್ತು ಚೆನ್ನಮಲ್ಲಿಕಾರ್ಜುನನೆಂಬ ಅರಿವಿನ ದೇವನನ್ನೇ ತನ್ನ ಪತಿಯಾಗಿಸಿಕೊಂಡಂಥ ಅವಳ ಧೋರಣೆಯನ್ನು ಪರೀಕ್ಷಿಸುವಾಗ ಸಹಜವಾಗಿ ಮೇಲಿನಂತೆ "ಪ್ರಾಣದಲ್ಲಿ ಮಾಯೆಯಿರಲು ಅದೇತರ ನಿರ್ವಾಣ" ಎಂಬ ತನ್ನ ಅಭಿಪ್ರಾಯ ವ್ಯಕ್ತಪಡಿಸುತ್ತಾನೆ.

ಕಾಯವೆಂಬ ದೇಹದಲ್ಲಿ ಕಳವಳವನ್ನು ಹೊಂದಿದ್ದರೆ ಅದೆಂಥ ನಿರ್ಮಲ ಮನ?, ಪ್ರಾಣದಲ್ಲಿಯ ಮಾಯೆಯಂಬ ಪಾಶವನ್ನು ಹೊಂದಿದ್ದಾಗ ಅದೆಂಥ ವೈರಾಗ್ಯದ ನಿರ್ವಾಣ?

ಇರಲು ಸಾಧ್ಯವೆಂಬ ಅಂಶವನ್ನು ತಾನು ಗುರುತಿಸಿದವನಂತೆ ನಟಿಸಿ ಹೀಗಿದ್ದರೆ ಇದೆಂಥ ಮನ ನಿನ್ನದು, ಇದೆಂಥ ನಿರ್ವಾಣ? ನಿನ್ನದು ಹೀಗಿದ್ದರೆ ಮಹಾಲಿಂಗವೆಂಬ ತ್ರಿಪುರಾಂತಕ ಲಿಂಗ ನಿನ್ನನ್ನು ಸಂಹಾರಿ ಎನ್ನಬಲ್ಲನೇ ಹೊರತು "ಸಜ್ಜನೆ" ಎನ್ನಲಾರ ಎಂದು ಪ್ರಶ್ನಿಸುತ್ತಾರೆ. ಅದಕ್ಕೆ ಅಕ್ಕ ಸಮರ್ಥವಾಗಿಯೇ ತನ್ನ ವೈರಾಗ್ಯದ ಧೋರಣೆಯನ್ನು ತನ್ನ ಮನದೊಳಗಣ ಪತಿ ಆ ದೇವ ಚೆನ್ನಮಲ್ಲಿಕಾರ್ಜುನನ ಬಗೆಗೆ ಮಾರ್ಮಿಕವಾಗಿ ಉತ್ತರಿಸುತ್ತಾಳೆ.

ಇಲ್ಲಿ ಒಂದು ವಿಷಯ ಸಂಶೋಧನೆಗೊಳಪಡಬೇಕಾಗಿದೆ– ಕೆಲವು ಜನಪದರ ದೃಷ್ಟಿಯಲ್ಲಿ ಕಿನ್ನರಿ ಬೊಮ್ಮಯ್ಯ ಅಕ್ಕಮಹಾದೇವಿಯ ಪ್ರೀತಿಯನ್ನು ಬಯಸಿದ್ದ, ಪ್ರೀತಿಯ ಭಾವದಲ್ಲಿದ್ದ ಎಂಬುದನ್ನು ಅಭಿವ್ಯಕ್ತಿಸುತ್ತಾರೆ. ಆದರೆ ನನ್ನ ಅಂದಾಜಿನ ಪ್ರಕಾರ ಬೊಮ್ಮಯ್ಯನವರಿಗೆ ಅಕ್ಕಮಹಾದೇವಿ ಬಗೆಗೆ ಪ್ರೀತಿಯ ಮೋಹವಿರದೇ ಕೇವಲ ಬಸವಣ್ಣನವರು ವಹಿಸಿದ ಹೊಣೆಗಾರಿಕೆಯನ್ನು ನಿಭಾಯಿಸುವ ಅಂದರೆ ಆಕೆಯ ವೈರಾಗ್ಯವನ್ನು ಪರೀಕ್ಷಿಸಿ ಆಕೆ ವೈರಾಗ್ಯ ನಿಧಿ ಎಂಬುದನ್ನು ನಿರೂಪಿಸಬೇಕಿತ್ತು. ಇಷ್ಟಾದರೂ ಮುಂದೆ ಆಕೆ ಅನುಭವ ಮಂಟಪದಲ್ಲಿ ಮತ್ತೇ ಅಲ್ಲಮಪ್ರಭುವಿನಿಂದ ಪರೀಕ್ಷೆಗೊಡ್ಡಿಕೊಳ್ಳುವ ಮೂಲಕ "ವೈರಾಗ್ಯ ನಿಧಿ"ಗೆ ಭಾಜನಳಾಗುತ್ತಾಳೆ. ಹಾಗಾಗಿ ಇಲ್ಲಿ ಬೊಮ್ಮಯ್ಯನವರಿಗೆ ಮಹಾದೇವಿ ಕೇವಲ ಸಹೋದರಿ ಸಮಾನಳಾಗಿದ್ದಳೆನಿಸುತ್ತದೆ.

ಹೀಗೆ ಬೊಮ್ಮಯ್ಯ ಅಕ್ಕನನ್ನು ಪರೀಕ್ಷಿಸುವಾಗ,

"ಮಸ್ತಕವ ಮುಟ್ಟಿ ನೋಡಿದಡೆ, ಮನೋಹರದಳಿವು ಕಾಣಬಂದಿತ್ತು, ಮುಖಮಂಡಲವ ಮುಟ್ಟಿ ನೋಡಿದಡೆ ಮೂರ್ತಿಯ ಅಳಿವು ಕಾಣ ಬಂದಿತ್ತು, ಕೊರಳ ಮುಟ್ಟಿ ನೋಡಿದಡೆ, ಗರಳಧರನ ಇರವು ಕಾಣ ಬಂದಿತ್ತು, ತೋಳುಗಳ ಮುಟ್ಟಿ ನೋಡಿದಡೆ ಶಿವನಪ್ಪುಗೆ ಕಾಣ ಬಂದಿತ್ತು, ಉರಸ್ಥಲವ ಮುಟ್ಟಿ ನೋಡಿದಡೆ ಪರಸ್ಥಲದಂಗಲೇಪ ಕಾಣ ಬಂದಿತ್ತು, ಬಸಿರ ಮುಟ್ಟಿ ನೋಡಿದಡೆ, ಬ್ರಹ್ಮಾಂಡವ ಕಾಣ ಬಂದಿತ್ತು, ಗುಹ್ಯವ ಮುಟ್ಟಿ ನೋಡಿದಡೆ ಕಾಮದಹನ ಕಾಣ ಬಂದಿತ್ತು, ಮಹಾಲಿಂಗ ತ್ರಿಪುರಾಂತಕದೇವಾ ಮಹಾದೇವಿಯಕ್ಕನ ನಿಲುವನರಿಯದೆ ಅಳುಪಿ ಕೆಟ್ಟೆನು" ಎಂಬ ಬೊಮ್ಮಯ್ಯನ ವಚನವನ್ನಿಲ್ಲಿ ಗಮನಿಸಬಹುದು. ಈ ವಚನವನ್ನು ಅವಲೋಕಿಸಿದಾಗ ಬೊಮ್ಮಯ್ಯ ಅಕ್ಕಮಹಾದೇವಿಯನ್ನು ಪರೀಕ್ಷಿಸುವಾಗ ಕಂಡುಕೊಂಡ ಬೆರಗು ಮತ್ತು ನಿಷ್ಠೆಯನ್ನು ಬಿಂಬಿಸುತ್ತಾನೆ. ಆಕೆಯ ನೆತ್ತಿಯನ್ನು ಮುಟ್ಟಿದಾಗ ಐಹಿಕ ಜಗತ್ತಿನಿಂದ ಆಕೆ ವಿಮುಖವಾಗಿದ್ದನ್ನು ಗುರುತಿಸುತ್ತಾರೆ, ಮುಖ ಮುಟ್ಟಿ ನೋಡಿದಾಗ ನಿರಾಕಾರ ಸ್ಥಿತಿಯಲ್ಲಿದ್ದ ಆಕೆಯ ನಿರ್ಲಿಪ್ತ ಮನೋಭಾವ ಗೋಚರಿಸುತ್ತದೆ, ಕೊರಳನ್ನು ಮುಟ್ಟಿದಾಗ ಅಲ್ಲಿ ನೀಲಕಂಠನ ಇರುವಿಕೆ ಅರಿವಿಗೆ ಬರುತ್ತದೆ, ತೋಳುಗಳನ್ನು ಮುಟ್ಟಿದಾಗ ಅಲ್ಲಿ ಚೆನ್ನಮಲ್ಲಿಕಾರ್ಜುನನೇ ಆವರಿಸಿಕೊಂಡಿದ್ದು ಕಂಡುಬರುತ್ತದೆ, ಎದೆ ಮುಟ್ಟಿದಾಗ ಅಲ್ಲಿ ಪರಶಿವನಿರುವಿಕೆ ತೋರುತ್ತದೆ, ಹೊಟ್ಟೆ ಮುಟ್ಟಿದಾಗ ಅಲ್ಲಂತೂ ಬ್ರಹ್ಮಾಂಡದ ಬೆರಗು ಕಾಣುತ್ತದೆ, ಗುಪ್ತಾಂಗ ಮುಟ್ಟಿದಾಗ ಕಾಮದಹನವಾದಂತ ವಿಸ್ಮಯತೆ ಅರಿವಾಗುತ್ತದೆ, ಓ ದೇವರೆ ಮಹಾದೇವಿಯಕ್ಕನ ದಿವ್ಯತೆ ಅರ್ಥೈಸಿಕೊಳ್ಳದೆ ಪರೀಕ್ಷಿಸಿ ನಾ ಕೆಟ್ಟೆ ಎಂದು ಪಶ್ಚಾತ್ತಾಪಿಯಾಗಿ "ನಾನು ಹುಲಿ ನೆಕ್ಕಿ ಬದುಕಿದೆನು" ಶರಣಾರ್ಥಿ ತಾಯಿ ಶರಣಾರ್ಥಿ ಎನ್ನುತ್ತಾರೆ.

"ನಿನ್ನ ಸ್ವರೂಪ ಕಂಡೆನ್ನ ದೃಷ್ಟಿ ನಟ್ಟುದೆನಗೆ ನಿನ್ನ ಲಾವಣ್ಯರಸವ ಕಂಡು ಮನ ಹಾರೈಸಿತ್ತೆನಗೆ, ನಿನ್ನ ಪ್ರವುಡಿಯಿಂದ ಕೂಡಿದೆನೆಂಬುದು ಭಾವದಲ್ಲಿ ಬಚ್ಚಬರಿಯ ಹೆಂಗಸಾಗಿ ತೋರಿತ್ತೆನಗೆ, ಮಹಾಲಿಂಗ ತ್ರಿಪುರಾಂತಕನೆನಗೊಡ್ಡಿದ ಮಾಯೆಯ ನಿನ್ನ ಸಮಸುಖ ಕೂಟದೊಳಿರ್ದು ಶಿವಭಾವಭಕ್ತಿಯಂ ಗೆಲುವೆನು ಮಹಾ ಹೆಣ್ಣು ಎಂದು ಕೈವಿಡಿದೆನು"

ಎಂದು ತಮ್ಮ ವಚನದ ಮೂಲಕ ಒಪ್ಪಿಕೊಂಡ ಬೊಮ್ಮಯ್ಯ ಅಕ್ಕಮಹಾದೇವಿಯನ್ನು ಆ ಪರೀಕ್ಷೆಯಲ್ಲಿ ಉತ್ತೀರ್ಣ ಮಾಡಿ, ಅನುಭವ ಮಂಟಪಕ್ಕೆ ಕಳುಹಿಸುತ್ತಾನೆ. (ಅಕ್ಕಮಹಾದೇವಿಯನ್ನು ಹೀಗೆಲ್ಲ ಪರೀಕ್ಷಿಸುವ ಅವಶ್ಯಕತೆ ಇರಲಿಲ್ಲ, ಆದರೆ ಬಾಹ್ಯ ಪ್ರಪಂಚಕ್ಕೆ ಅಕ್ಕನ ಬಯಲ ಭಕ್ತಿ, ಬಯಲಭಾವವನ್ನು ಅನಾವರಣಗೊಳಿಸಬೇಕಿತ್ತೆನಿಸುತ್ತದೆ) ಇಲ್ಲಿ ಕಿನ್ನರಿ ಬೊಮ್ಮಯ್ಯ ಕೇವಲ ಸಾಂಕೇತಿಕವಾಗಿ ಪರೀಕ್ಷಕನಾಗಿದ್ದಾನೆಂದು ತೋರುತ್ತದೆ.

ಕಿನ್ನರಿ ಬೊಮ್ಮಯ್ಯನವರು ಇಂದಿನ ಆಂಧ್ರಪ್ರದೇಶದ "ಪುಂಡೂರು" ಎಂಬ ಗ್ರಾಮದಲ್ಲಿ ಕಲಿದೇವಿ ಎಂಬ ತಾಯಿಯ ಮಗನಾಗಿ ಕ್ರಿ.ಶ. ೧೧೬೦ ಭಾರತ ಹುಣ್ಣಿಮೆ ದಿನದಂದು ಜನಸಿದರೆಂಬುದೊಂದು ಅಂದಾಜು. ಇವರು ರಚಿಸಿದ ಹಲವು ವಚನಗಳಲ್ಲಿ ಇಂದು ಲಭ್ಯವಿರುವುದು ಕೇವಲ ೧೮ ವಚನಗಳು. ಇವರ ಅಂಕಿತ ನಾಮ "ತ್ರಿಪುರಾಂತಕ ಲಿಂಗ" ಮೊದಲು ಅಕ್ಕಸಾಲಿಗ ಕಾಯಕವನ್ನು ನಿರ್ವಹಿಸುತ್ತಿದ್ದರು. ನಂತರ ಬಸವ ಕಲ್ಯಾಣಕ್ಕೆ ಬಂದು ತ್ರಿಪುರಾಂತಕೇಶ್ವರನ ಮುಂದೆ ಕಿನ್ನರಿ ನುಡಿಸುವ ಕಾಯಕವನ್ನು ಆಲಂಗಿಸಿಕೊಂಡದ್ದಕ್ಕಾಗಿ "ಕಿನ್ನರಿ ಬೊಮ್ಮಯ್ಯ" ಅಥವಾ "ಕಿನ್ನರಿ ಬ್ರಹ್ಮಯ್ಯ" ಎಂದು ಗುರುತಿಸಿಕೊಂಡಿದ್ದರು. ಬಸವಣ್ಣನವರ ಅಂತರಂಗದ ಸಖ ಆಗಿದ್ದರು.

ಒಂದೊಮ್ಮೆ ಇವರ ಪ್ರಾಣ ಪಕ್ಷಿ ಹಾರಿ ಹೋದಾಗ ಬಸವಣ್ಣ ತಮ್ಮ ಪ್ರಾಣವನ್ನು ಧಾರೆ ಎರೆದರೆಂಬ ಪ್ರಸಂಗ ಜನಪದರಲ್ಲಿ ಬರುತ್ತದೆ. ಇನ್ನೊಬ್ಬರಿಗೆ ಪ್ರಾಣ ಧಾರೆ ಎರೆಯುವುದು ವೈಜ್ಞಾನಿಕವಾಗಿ ಅಸಾಧ್ಯವಾಗಿದ್ದರೂ ಶರಣರಲ್ಲಿ ವಿಭಿನ್ನತೆಯೇ ಇರಲಿಲ್ಲ. ದೇಹ ಬೇರೆಯಾದರೂ ಅವರಲ್ಲಿಯ ಆತ್ಮ ಒಂದೇ ಆಗಿತ್ತು. ಅಂಗ ಬೇರೆಯಾಗಿದ್ದರೂ ಅವರೊಳಗಣ ಲಿಂಗ ಅಥವಾ ಲಿಂಗಗುಣ ಒಂದೇಯಾಗಿದ್ದು ಅದೇ ಎಲ್ಲಾ ಲಿಂಗಗಳ ಒಟ್ಟು ಮೊತ್ತವೇ ಪರಶಿವ ಅಥವಾ ದೇವನಾಗಿದ್ದ. ಹೀಗಾಗಿ ಆತ್ಮ, ಪ್ರಾಣ, ಲಿಂಗದ ಗುಣಗಳೆಲ್ಲವೂ ಒಂದೇ ಮೌಲ್ಯ ಆಗಿದ್ದವೆಂಬುದಕ್ಕೆ ಇದೊಂದು ಲೆಕ್ಕಾಚಾರದ ಪರಿಕಲ್ಪನೆಯೆಂದು ಒಪ್ಪಿಕೊಳ್ಳಲು ಸಾಧ್ಯವಿದೆ.

ಇಂದಿನ ಬೀದರ ಜಿಲ್ಲೆಯ ಹುಮ್ನಾಬಾದ್ ತಾಲ್ಲೂಕಿನ ಹಳ್ಳಿಖೇಡಕೆ ಎಂಬ ಗ್ರಾಮದಲ್ಲಿ ಇವರ ಗುಡಿಯೊಂದಿದೆ, ಗುಡಿಯೆನ್ನುವುದಕ್ಕಿಂತ ಅದು ಬೊಮ್ಮಯ್ಯನವರ ಗವಿಯಾಗಿತ್ತೆನಿಸುತ್ತದೆ. ಆ ಗವಿಯಲ್ಲಿ ಅವರು ಶಿವಯೋಗ ಸಾಧನೆ ಮಾಡಿದ್ದಿರಬಹುದು. ಇಲ್ಲಿರುವುದು ಸಮಾಧಿಯಂತೂ ಅಲ್ಲ. ಇದು ಕಲ್ಯಾಣದ ಮಹಾದ್ವಾರವಾಗಿದೆ. ಅಲ್ಲಿ ಇಂದಿಗೂ ಶ್ರಾವಣ ಮೂರನೇ ಸೋಮವಾರ ಕಿನ್ನರಿ ಬೊಮ್ಮಯ್ಯನ ಜಾತ್ರೆಯನ್ನು ಬಹಳ ವೈಚಾರಿಕವಾಗಿ ವಿವಿಧ ಕಾರ್ಯಕ್ರಮಗಳೊಂದಿಗೆ ಅನುಭಾವ ಗೋಷ್ಠಿಯನ್ನೇರ್ಪಡಿಸಿ ಆಚರಿಸುತ್ತಾರೆ. ಬೊಮ್ಮಯ್ಯನ ಜಾತ್ರೆಯೆಂದರೆ ಬಹುಶಃ ಅವರ ಲಿಂಗೈಕ್ಯದ ದಿನವೆಂದೆನಿಸುತ್ತದೆ. ಈ ಜಾತ್ರೆಯೆಂದರೆ ಕಾರಣಾಂತರದಿಂದ ದೂರವಾಗಿದ್ದವರನ್ನೂ ಒಂದಾಗಿಸಿ ಪರಸ್ಪರರ ಮಧ್ಯ ಎದ್ದಿರುವ ಸ್ಥಾವರ ಗೋಡೆಗಳನ್ನುರುಳಿಸಿ ಜಂಗಮತ್ವದ ಸೇತುವೆಯನ್ನು ನಿರ್ಮಿಸುವಂಥ ಪವಿತ್ರ ದಿನವಾಗಿದೆ. ಎಲ್ಲ ಬಗೆಯ ಸ್ಥಾವರಗಳಳಿದ ಜಂಗಮತ್ವ ಅನಾವರಣಗೊಳಿಸುವ ವಿಧಾನವಿಲ್ಲಿದೆ. ಆ ಜಾತ್ರೆಯ ದಿನದ ಸಂಭ್ರಮದಲ್ಲಿದ್ದ ಎಲ್ಲರಲ್ಲಿ ಬೊಮ್ಮಯ್ಯ ಶರಣರ ಬಗ್ಗೆ ಅಪಾರ ಭಕ್ತಿ ಭಾವವನ್ನು ಗುರುತಿಸಬಹುದಾಗಿದೆ.

ಬೊಮ್ಮಯ್ಯನ ತಂಗಿಯೇ ಅಗಿದ್ದ ಅಕ್ಕಮಹಾದೇವಿ ಕೆಲ ದಿನ ಇಲ್ಲಿ ತಂಗಿದ್ದ ಕಾರಣ ಹಳ್ಳಿಖೇಡದಲ್ಲಿ "ತಂಗಿಯ ಗುಡ್ಡ" ಎಂದು ಕರೆಯುವ ಸ್ಥಳವಿದೆ. ಬೊಮ್ಮಯ್ಯನವರು ಸಕಲ

ಜೀವಿಗಳಿಗೆ ಲೇಸನೇ ಬಯಸುವುದನ್ನು ಬಹಳವಾಗಿ ಪ್ರತಿಪಾದಿಸುತ್ತಿದ್ದ ಕಾರಣ ಪ್ರಾಣಿ ಹಿಂಸೆಯನ್ನು ವಿರೋಧಿಸುತ್ತಿದ್ದರು. ಇಂದಿಗೂ ಈ ಊರಲ್ಲಿ ಪ್ರಾಣಿ ಬಲಿ ಇಲ್ಲವೆಂಬುದು ನನ್ನ ಗಮನಕ್ಕಿದೆ. ಒಂದೊಮ್ಮೆ ಮಾಂಸಹಾರಿಗಳು ಮಾಂಸದೂಟ ಮಾಡಬೇಕೆಂದರೂ ಬೇರೊಂದು ಊರಿನಿಂದ ಮಾಂಸವನ್ನು ತರಿಸಿಕೊಂಡು ಅಡುಗೆ ಮಾಡಿಕೊಂಡು ಊಟ ಮಾಡಲು ಮಾತ್ರ ಅವಕಾಶವಿದೆಯಂತೆ. ಇಂದಿಗೂ ಶರಣರ ನಡೆಯನ್ನು ತಮ್ಮ ನಡೆಯಾಗಿಸಿಕೊಂಡಿರುವ ಈ ಗ್ರಾಮದಲ್ಲಿರುವವರ ಧೋರಣೆಗೆ ನಾನು ಶರಣಾರ್ಥಿಯಾಗಿರುವೆ. ಈ ಬಗೆಯಲ್ಲಿ ಆದರ್ಶದ ನುಡಿಗೆ ಬದ್ಧತೆಯ ನಡೆಗಳು ಇಂದು ನಮ್ಮವಾಗಬೇಕಿದೆ.

"ಆವ ಮಡಿಕೆಯಾಗಲಿ ಸ್ವಾದ ಸಾಕಾರದಲ್ಲಿ ಭೇದವಲ್ಲ, ಮಣ್ಣ ಮಡಿಕೆ ಒಕ್ಕಲಿಗನಲ್ಲಿ, ಚಿನ್ನದ ಮಡಿಕೆ ಅರಮನೆಯಲ್ಲಿ, ಅರಮನೆ ಗುರುಮನೆ ಒಂದಾದ ಕಾರಣ–ಹಾದರ ಸಲ್ಲದು ಕಾಣಾ, ತ್ರಿಪುರಾಂತಕಲಿಂಗವೇ"

ಇದು ಬೊಮ್ಮಯ್ಯನ ಮಹತ್ವದ ವಚನ. ಮಡಿಕೆ ಯಾವುದಾದರೇನು ಮಣ್ಣಿನದಾಗಲೀ ಚಿನ್ನದ್ದೇ ಆಗಿರಲಿ ಅದರಲ್ಲಿಯ ಪ್ರಸಾದದ ರುಚಿಯಲ್ಲಿ ಬದಲಾವಣೆ ಸಾಧ್ಯವೇ? ಎಂದು ಪ್ರಶ್ನಿಸುತ್ತಾರೆ. ಬಡವನೇ ಆಗಲಿ, ಸಿರಿವಂತನೇ ಆಗಲಿ, ಬ್ರಾಹ್ಮಣನೇ ಆಗಲೀ, ದಲಿತನೇ ಆಗಲೀ ಆತನ ವಿಚಾರ ಒಳ್ಳೆಯದಾಗಿದ್ದರೆ ಎಲ್ಲರಿಗೂ ಒಳ್ಳೆಯದೇ ಆಗಿರುತ್ತದೆಯಲ್ಲವೇ? ಭೌತಿಕ ಶರೀರಕ್ಕೆ ಜಾತಿ, ಧರ್ಮವಿರಬಹುದು ಆದರೆ ಅಂತರ್ಯದ ಜೀವಕ್ಕೆ ಯಾವ ಬೇದಭಾವ? ಯಾವ ಜಾತಿ? ಎಲ್ಲವೂ ಒಂದೇ ಅಲ್ಲವೇ? ಎನ್ನುತ್ತಾರೆ. ಹಾಗೆಯೇ ಅರಮನೆಯಾಗಲೀ ಗುರುಮನೆಯಾಗಲೀ ಅಲ್ಲಿ ಹಾದರ ಸಲ್ಲದು ಎಂಬುದು ಇವರ ನಿಲುವು. ಭ್ರಷ್ಟ ಆಚಾರ ಮತ್ತು ವಿಚಾರಗಳು ಎಲ್ಲಿ ನಡೆದರೂ ಕೆಟ್ಟ ಪರಿಣಾಮವೇ ಹೊರತು ಯಾರಿಗೂ ಅದರಿಂದ ಒಳ್ಳೆಯದಲ್ಲವೆಂಬುದು ಇವರ ಈ ವಚನದಲ್ಲಿಯ ಎಚ್ಚರಿಕೆಯ ಚಿಂತನೆಯ ಕ್ರಮವನ್ನು ಗಮನಿಸಬಹುದು.

"ಚಿನಿಪಾಲ ಚಿನ್ನದ ಹರಿವಾಣದಲ್ಲಿ ಭೋಗಿಪುದು ಭೂಷಣವಲ್ಲದೆ, ಮಣ್ಣ ಹರಿವಾಣದಲ್ಲಿ ಭೂಷಣವೆ? ತಾ ಮಾಳ್ಪ ಶಿವಲಿಂಗ ಪೂಜೆಗೆ ಕಾಯ ಪವಿತ್ರವಲ್ಲದೆ, ಅಪವಿತ್ರವೆಂತೊ ತ್ರಿಪುರಾಂತಕಲಿಂಗವೇ?"

ಈ ವಚನವನ್ನೊಮ್ಮೆ ಅವಲೋಕಿಸಿದಾಗ, ಚಿನ್ನದ ತಟ್ಟೆಯಾದರೇನು, ಮಣ್ಣಿನ ತಟ್ಟೆಯಾದರೇನು ಭೋಗಿಸುವಾತನಿಗೆ ಒಂದೇ ಅಲ್ಲವೇ ಹಾಗೆಯೇ ತನ್ನೊಳಗೇ ಇರುವ ಶಿವ, ದೇವನನ್ನು ಪೂಜಿಸಿಕೊಳ್ಳಲು ಪವಿತ್ರವಾದ ಕಾಯ ಇದ್ದರಷ್ಟೇ ಸಾಕು. ಕಾಯ ಯಾವುದಾದರೇನು ಮೇಲ್ಜಾತಿಯ ಕಾಯ ಪವಿತ್ರ, ಕೆಳಜಾತಿಯ ಕಾಯ ಕನಿಷ್ಟವೆಂಬ ಬೇಧವುಂಟೇನು? ಸತ್ಯಶುದ್ಧವಾದ ಕಾಯಕದಲ್ಲಿ ನಿರತವಾದ ಸತ್ಯಶುದ್ಧವಾದ ಮನಸ್ಸಿನಿಂದ ತನ್ನ ಕಾಯದೊಳಗೇ ಇರುವ ದೇವನನ್ನು ಇಷ್ಟಲಿಂಗದ ಮೂಲಕ ಜಾಗ್ರತಗೊಳಿಸಿಕೊಳ್ಳುವಾತನೇ ನಿಜವಾದ ಭಕ್ತ. ಆತನಿಗೆ ಯಾವುದೇ ರೀತಿಯ ಭೇದಭಾವವಿರದೆನ್ನುತ್ತಾರೆ.

ತನು ಸಜ್ಜೆ ಮನ ಲಿಂಗವಾದ ಬಳಿಕ ಆನು ಮತ್ತೆ ಬೇರೆ ಅರಸಲುಂಟೆ? ತನುವೆ ಬಸವಣ್ಣ ಮನವೇ ಪ್ರಭುದೇವರೆಂಬ ಮಹಾ ಘನವನೊಳಕೊಂಡಿರ್ದ ಬಳಿಕ ಗುಣಾವಗುಣವ ಸಂಪಾದಿಸುವರೆ? ಮಹಾಲಿಂಗ ತ್ರಿಪುರಾಂತಕದೇವ"

ತಮ್ಮ ತನು ಅಂದರೆ ದೇಹವೇ ಇಷ್ಟಲಿಂಗ (ಸಜ್ಜೆ) ತಮ್ಮ ಮನವೇ ಜ್ಞಾನಲಿಂಗ (ಅರಿವು) ಆಗಿ ಪೂಜಿಸಿಕೊಂಡಾಗ ಬೇರೆ ದೇವನನ್ನು ಅರಸಲೇಕೆ? ಎನ್ನುವ ಮೂಲಕ



ಇಷ್ಟಲಿಂಗದ ಮೂಲಕವೇ ತನ್ನ ಕಾಯದೊಳಗೇ ಇರುವ ದೇವನನ್ನು ಕಾಣುವಂಥ ಶರಣರ ಧೋರಣೆಯನ್ನು ಇಲ್ಲಿ ಬೊಮ್ಮಯ್ಯ ಪ್ರತಿಪಾದಿಸುತ್ತಾರೆ. ಬಸವಣ್ಣ ಮತ್ತು ಅಲ್ಲಮರೊಡನೇ ತಮ್ಮ ಸಾಮರಸ್ಯವನ್ನು ಬಿಂಬಿಸುತ್ತಾ ತಮ್ಮ ತನುವೇ ಬಸವಣ್ಣ, ತಮ್ಮ ಮನವೇ ಅಲ್ಲಮಪ್ರಭು ಎನ್ನುವ ಮೂಲಕ ಸಾಂಕೇತಿಕವಾಗಿ ಎಲ್ಲ ಶರಣರ ಘನ ಒಂದರೊಳಗೇ ಇರುವಾಗ ಗುಣಾವಗುಣಗಳನ್ನು ಮತ್ತೇಕೆ ಸಂಪಾದಿಸಬೇಕೆನ್ನುತ್ತಾರೆ. ಇದು ಸಮಷ್ಠಿಯೆಲ್ಲವೂ ಶರಣತ್ವವಾಗಬೇಕು. ವಿಶ್ವವೆಲ್ಲವೂ ಲಿಂಗತತ್ವದಲ್ಲಿ ಪ್ರಕಾಶಿಸಬೇಕೆನ್ನುವಲ್ಲಿ ಉದಾತ್ತ ಚಿಂತನೆ ಅಂತರ್ಗತವಾಗಿದೆ.

ಹುಟ್ಟಿತ್ತಲ್ಲಾ ಉಂಟೆನಿಸಿತ್ತಲ್ಲಾ. ಕರುವಿಟ್ಟಿತ್ತಲ್ಲಾ ರೂಪಾಯಿತ್ತಲ್ಲಾ. ನೋಡ ನೋಡ ವಾಯುಗುಂದಿತ್ತಲ್ಲಾ ಅರಿವು ವಿಕಾರದಲ್ಲಿ ಆಯಿತ್ತು, ಹೋಯಿತ್ತು, ಮಹಾಲಿಂಗ ತ್ರಿಪುರಾಂತಕ, ನಿಮಗೆರಗದ ತನು"

ಇಲ್ಲಿ ಇಷ್ಟಲಿಂಗದೊಡನೆಯ ಅನುಸಂಧಾನ, ಶಿವಯೋಗದ ಅರಿವು ಇದೆ. ಸಾಕಾರ ಇಷ್ಟಲಿಂಗದ ಮೂಲಕ ನಮ್ಮ ಕಾಯದೊಳಗಿರುವ ನಿರಾಕಾರ ಅರಿವಿನ ಲಿಂಗವನ್ನು ಕಂಡುಕೊಳ್ಳುವ ಬಗೆಯನ್ನು ಬಿಂಬಿಸಿದ್ದಾರೆ. ಹೀಗೆ, ಇಷ್ಟಲಿಂಗದೊಂದಿಗೆ ಲಿಂಗಾಂಗ ಸಾಮರಸ್ಯ ಮೈಗೂಡಿಸಿಕೊಂಡಾಗ ನಿರಾಕಾರಲಿಂಗವೇ ರೂಪಾಗಿ ದೇವದರ್ಶನವಾಗುತ್ತದೆಂಬ ಅನುಭಾವವಿಲ್ಲಿದೆ. ಆ ಅರಿವೆಂಬ ಲಿಂಗಕ್ಕೆರಗದಿದ್ದರೆ ಅರಿವು ರೂಪವಾಗಿ ಕಾಣದೇ ವಿಕಾರವಾಗಿ ಹೋಗಿಬಿಡುತ್ತೆಂಬುದನ್ನು ಇಲ್ಲಿ ಬೊಮ್ಮಯ್ಯ ಬಿಂಬಿಸುತ್ತಾರೆ.

ಕಾಯಕ ತತ್ವವನ್ನೇ ಪ್ರತಿಪಾದಿಸಿದ ಹಲವಾರು ಶರಣರಲ್ಲಿ ಬೊಮ್ಮಯ್ಯ ಪ್ರಮುಖರು. ಒಂದೊಮ್ಮೆ ಹಸಿವಿನ ಬಾಧೆಯಿಂದ ಬಳಲುತ್ತಿದ್ದ ಬಡವನೊಬ್ಬ ಅನ್ನ ಕೇಳಿದಾಗ ಕಾಯಕ ಮಾಡಿ ನಿನ್ನ ಅನ್ನವನ್ನು ಗಳಿಸಿಕೊ ಶ್ರಮವಿಲ್ಲದೆ ಅನ್ನ ಪಡೆದರೆ ನಿನಗದು ಪ್ರಸಾದವಾಗದು ಎಂದು ಕಾಯಕದ ಮಹತ್ವನ್ನು ಆತನಿಗೆ ತಿಳಿಸುತ್ತಾರೆ. ಹೀಗೆ ಹಸಿದವನಿಗೆ ಅನ್ನ ಕೊಡುವುದಕ್ಕಿಂತ, ದಿಕ್ಕೆಟ್ಟವರಿಗೊಮ್ಮೆ ಮಾರ್ಗದರ್ಶಿಯಾಗುವುದಕ್ಕಿಂತ ಅವರಿಗೆ ಕಾಯಕ ಮಾಡಿಕೊಂಡೇ ಶಾಶ್ವತವಾಗಿ ತಮಗೆ ಬೇಕಾದ ಅನ್ನ, ಅರಿವು, ಅರಿವೆಯನ್ನು ತಾವೇ ಸಂಪಾದಿಸಿಕೊಳ್ಳಲು ಸಾಧ್ಯವಾಗವಂಥ ಬದುಕನ್ನು ಕಟ್ಟಿಕೊಳ್ಳುವಂತೆ ಬದುಕಿನ ಪಥ ತೋರುವುದು ಇವರ ವಿಶಿಷ್ಟ ನಡೆಯಾಗಿತ್ತು.

ಹೀಗೆ, ತಮ್ಮ ನಡೆಯೊಳಗೇ ನುಡಿಯ ಪೂರೈಸಿಕೊಳ್ಳುತ್ತಲೇ ಕಲ್ಯಾಣದ ಕ್ರಾಂತಿಯ ಸಂದರ್ಭದಲ್ಲಿ ಇವರು ಉಳವಿಯತ್ತ ತೆರಳಿದ ಶರಣರ ತಂಡದಲ್ಲಿ ಸೇರುತ್ತಾರೆ. ತಮ್ಮ ಪ್ರಾಣರಕ್ಷಣೆಗಿಂತ ವಚನಗಳ ರಕ್ಷಣೆಗೆ ಹೆಚ್ಚಿನ ಗಮನವಿಟ್ಟು ರಕ್ಷಿಸಿದ ಕಾರಣಕ್ಕೇ ಬೊಮ್ಮಯ್ಯನನ್ನು "ರಕ್ಷಕ ಬೊಮ್ಮಯ್ಯ" ಎಂತಲೂ ಕರೆಯುವುದುಂಟು. ಕದ್ರೋಳಿ ಎಂಬಲ್ಲಿ ಬಿಜ್ಜಳನ ಸೈನ್ಯದೊಡನೆ ಯುದ್ಧವಾಗುತ್ತದೆ. ಅಲ್ಲಿಯೂ ವಿರೋಚಿತವಾಗಿ ಹೋರಾಡಿ ವಚನಗಳನ್ನು ರಕ್ಷಿಸುತ್ತಾರೆ. ಮುಂದೆ "ಉಳವಿ"ಯಲ್ಲಿ ಬಯಲಾಗಿ "ಉಳಿ"ಯುತ್ತಾರೆ. ಇಂದಿಗೂ ಉಳವಿಯಲ್ಲಿ ಇವರ ಸಮಾಧಿಯ ಸ್ಮಾರಕವಿದೆ. ಈ ಸ್ಮಾರಕ ಸ್ಥಾವರವಾಗಿದ್ದರೂ ಸಹೃದಯದವರಿಗಲ್ಲಿ ಕಿನ್ನರಿ ಬೊಮ್ಮಯ್ಯನ ಲಿಂಗದುಸಿರು ಕೇಳುತ್ತಲೇ ಇದೆ. ಈಗಲೂ ಅಲ್ಲಿಯ ಕಿನ್ನರಿಯ ನೀನಾದದೊಂದಿಗೆ ಪ್ರಗತಿಪರತೆಯ ಎಚ್ಚರಿಕೆಯ ಘಂಟೆಯ ಸದ್ದಿದೆ. ಆಲಿಸುವ ಪ್ರಗತಿಪರ ಮನಸ್ಸಿರಬೇಕಷ್ಟೇ. ಅವರ ನುಡಿಯನ್ನಾಲಿಸಿ ನಮ್ಮ ನಡೆಯನ್ನು ಬೆಸೆಯಿಸುವ ಪ್ರಯತ್ನವಿದ್ದಲ್ಲಿ ನನ್ನೊಳಗಿರುವ ನನ್ನೊಡೆಯ ನನ್ನ ನಡೆಯನ್ನು ಮೆಚ್ಚಿ ಹೌದಹುದೆನ್ನಬಹುದೇನೋ?

# ವಚನ ರಸಪ್ರಶ್ನೆ ಸ್ಪರ್ಧೆ

## ವಚನ ರಸಪ್ರಶ್ನೆ-೨೬ರ ಸರಿಯುತ್ತರಗಳು

೧. (ಇ) ಹಿರೇಮಲ್ಲೂರು ಈಶ್ವರನ್ ೨. (ಆ) ಬಸವಣ್ಣ ಮತ್ತು ಅಂಬೇಡ್ಕರ್
೩.(ಇ) ಬತ್ತು ೪. (ಈ) ತಳವಾರ ಕಾಮಿದೇವಯ್ಯ ೫. (ಆ) ವೀರಶೂರ ರಾಮೇಶ್ವರ ಲಿಂಗ

'ಮಹಾಮನೆ'ಯ ಹಲವಾರು ಓದುಗರು "ವಚನ ರಸಪ್ರಶ್ನೆ-೨೬"ರ ಉತ್ತರಗಳನ್ನು ಕಳಿಸಿದ್ದಾರೆ. ಅವುಗಳಲ್ಲಿ ಲಾಟರಿ ಎತ್ತುವ ಮೂಲಕ ಆಯ್ಕೆಯಾದ ಇಬ್ಬರು ವಿಜೇತರ ಹೆಸರುಗಳು ಇಂತಿವೆ.

೧. ಶ್ರೀ ಚಂದ್ರಶೇಖರಪ್ಪ ಎಂ., ಸಾಗರ
೨. ಶ್ರೀ ಗಂಗಾಧರ ಪತ್ತಾರ ಟಿ.ಕೆ., ಬಳ್ಳಾರಿ

## ವಚನ ರಸಪ್ರಶ್ನೆ-೨೭ರ ಪ್ರಶ್ನೆಗಳು

೧. 'ನೀಲಾಂಬಿಕೆ' – ಕೃತಿಯನ್ನು ರಚಿಸಿದವರು:
(ಅ) ಬಿ.ಸಿ. ಶೈಲ ನಾಗರಾಜ್ (ಆ) ಪ್ರಮೀಳಾ ಮಾಧವ್
(ಇ) ಗೀತಾ ಪಿ.ಎಸ್. (ಈ) ಲೀಲಾದೇವಿ ಆರ್. ಪ್ರಸಾದ್

೨. "ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ" ಇದು ಯಾರ ಅಂಕಿತ ನಾಮ?
(ಅ) ಚಂದಿಮರಸ (ಆ) ಗಾವುದಿ ಮಾಚಯ್ಯ
(ಇ) ಘಟ್ಟಿವಾಳಯ್ಯ (ಈ) ಗೊಗ್ಗವ್ವೆ

೩. "ಹಾಡುವೆ ನಲ್ಲನ ಬೇಡುವೆ ನಲ್ಲನ" ಎನ್ನುವ ಸಾಲು ಯಾರ ವಚನದಲ್ಲಿ ಬರುತ್ತದೆ?
(ಅ) ಉರಿಲಿಂಗ ಪೆದ್ದಿ (ಆ) ಒಕ್ಕಲಿಗ ಮುದ್ದಯ್ಯ
(ಇ) ಕಂಬದ ಮಾರಿತಂದೆ (ಈ) ಉರಿಲಿಂಗದೇವ

೪. ಕಿಲಾರದ ಭೀಮಣ್ಣನ ಅಂಕಿತ ನಾಮವೇನು?
(ಅ) ತ್ರಿಪುರಾಂತಕ ಲಿಂಗ (ಆ) ಮಹಾಲಿಂಗ ತ್ರಿಪುರಾಂತಕ
(ಇ) ಧಾರೇಶ್ವರ (ಈ) ಶಂಕೇಶ್ವರ

೫. "ಕುರಿವಿಂಡು ಕಬ್ಬಿನ ಉಲಿವ ತೋಟವ ಹೊಕ್ಕು" ಎನ್ನುವ ಸಾಲಿನಿಂದ ಆರಂಭವಾಗುವ ವಚನ ಯಾರದು?
(ಅ) ಅಲ್ಲಮಪ್ರಭು (ಆ) ಬಸವಣ್ಣ
(ಇ) ಅಂಬಿಗರ ಚೌಡಯ್ಯ (ಈ) ನೀಲಮ್ಮ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.**



# ಶರಣೆಯರ ವಚನಗಳಲ್ಲಿ ವೈಚಾರಿಕತೆಯ ಮಹತ್ವ

**ಚಿಕ್ಕೋಳ್ ಈಶ್ವರಪ್ಪ**
*ಹಿರೇಕೋಗಲೂರು-೫೭೭ ೫೫೨*
*ಚನ್ನಗಿರಿ ತಾಲೂಕು, ದಾವಣಗೆರೆ ಜಿಲ್ಲೆ*
*ಮೊ: ೯೪೪೮೭ ೯೨೧೧೧*

ದೇಶದ ಇತಿಹಾಸದಲ್ಲಿ ೧೨ನೆಯ ಶತಮಾನ ನವ ಇತಿಹಾಸ ಸೃಷ್ಟಿಸಿದ ಕಾಲಘಟ್ಟ, ಮಾನವ ಮಾನವನ್ನೇ ತುಳಿತಕ್ಕೆ ಒಳಗುಮಾಡಿದ್ದ ಕಾಲ. ಮಾನವ ಸಂಸ್ಕೃತಿಯ ಮೇಲೆ ದಟ್ಟವಾದ ಧಾಳಿ ಮಾಡಿ, ಮೂಢನಂಬಿಕೆ ಅಂಧಶ್ರದ್ಧೆ, ಕಂದಾಚಾರ, ಅಜ್ಞಾನ, ಶೋಷಣೆ, ಮೌಢ್ಯ, ಮುಂತಾದ ಹೀನ ಸಂಸ್ಕೃತಿಯ ಬೀಜ ಬಿತ್ತಿ ಮೌಢ್ಯದ ಕತ್ತಲೆಯ ಕೂಪದಲ್ಲಿ ತಳ್ಳಿದ್ದ ಕಾಲಘಟ್ಟದಲ್ಲಿ "ಸಕಲ ಜೀವರಾಶಿಗಳಿಗೆ ಲೇಸನ್ನು ಬಯಸಲು ಹುಟ್ಟಿ ಬಂದ ಯುಗಪುರುಷ ಬಸವಣ್ಣ ಸಮಾಜದಲ್ಲಿದ್ದ ಅಜ್ಞಾನದ ಕತ್ತಲೆಯನ್ನು ಕಳೆದು, ಸುಜ್ಞಾನದ ಬೆಳಕನ್ನು ಬೆಳಗಿಸಲು ಹುಟ್ಟುಹಾಕಿದ ಚಳುವಳಿಯೇ "ವಚನ ಚಳುವಳಿ". ಈ ವಚನ ಚಳುವಳಿಯನ್ನು ಬೆಂಬಲಿಸಿ ದೇಶದ ನಾನಾಕಡೆಗಳಿಂದ ಬಸವಣ್ಣನಿದ್ದ ಕಲ್ಯಾಣಕ್ಕೆ ಧಾವಿಸಿ ಬಂದವರಲ್ಲಿ ಸಮಾಜದ ಎಲ್ಲಾ ವರ್ಗದ ಜನಗಳೂ ರಾಜರು, ರಾಣಿಯರು, ವಿವಿಧ ವೃತ್ತಿಯವರು, ವಿವಿಧ ಕುಲ ಕಸುಬಿನವರು, ಕಲೆ, ಸಾಹಿತ್ಯ, ಸಂಗೀತ, ಹಾಸ್ಯ, ನಾಟಕ ಮುಂತಾದ ವರ್ಗಮೂಲದಿಂದ ಬಂದವರಲ್ಲಿ ಶೋಷಿತರು, ತುಳಿತಕ್ಕೊಳಗಾದವರು ಮತ್ತು ಮಹಿಳೆಯರೂ ಒಳಗೊಂಡಿದ್ದರು,

ಈ ಚಳುವಳಿಯಲ್ಲಿ ೩೦೦ ಜನ ಶರಣೆಯರು ಸಹ ಭಾಗವಹಿಸಿದ್ದರಲ್ಲದೆ, ಅವರಲ್ಲಿ ೩೩ ಜನಶರಣೆಯರು ವಚನಗಳನ್ನು ರಚಿಸಿರುವುದು, ಉಲ್ಲೇಖವಾಗಿದೆ, ಇಷ್ಟೊಂದು ಜನ ಮಹಿಳೆಯರು ಏಕಕಾಲದಲ್ಲಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಕುಳಿತು ವಚನ ರಚಿಸಿದ ಇತಿಹಾಸ ಈ ಹಿಂದೆ ಜಗತ್ತಿನ ಇತಿಹಾಸದಲ್ಲಿ ಯಾವ ದೇಶದಲ್ಲಿಯೂ ಕಂಡುಬರದ ವಿಸ್ಮಯ.

ವೇದಗಳ ಕಾಲದಿಂದಲೂ ಸ್ತ್ರೀ ಸಮಾಜದ ಮೇಲೆ ಉನ್ನತಿ, ಅವನತಿ ನಡೆಯುತ್ತಲೇ ಬಂದಿದೆ. ವೇದಗಳ ಕಾಲದಲ್ಲೇ ಸಾಹಿತ್ಯ ರಚನೆಯಲ್ಲಿ ಆದ್ಯತೆಯನ್ನು ಕೊಡುತ್ತ ಬಂದಿರುವುದು ಗಮನಾರ್ಹ. ಸ್ತ್ರೀಯರಿಗೆ ಸಮಾಜದ ಅತ್ಯುನ್ನತ ಸ್ಥಾನ ಮಾನವನ್ನು ನೀಡಿದ್ದ ಕಾಲಘಟ್ಟವನ್ನು ಒಂದು ಸುವರ್ಣಯುಗವೆಂದು ಪರಿಗಣಿಸಬಹುದಾಗಿದೆ. ಪುರುಷರಿಗೆ ಸೀಮಿತವಾಗಿದ್ದ ಯುದ್ಧದಲ್ಲಿ ಭಾಗವಹಿಸುವುದು. ಖಗೋಳಶಾಸ್ತ್ರ ಮತ್ತು ತತ್ವಶಾಸ್ತ್ರಗಳನ್ನು ಮಹಿಳೆಯರು ಕಲಿಯಲು ಅವಕಾಶವನ್ನು ಒದಗಿಸಿತ್ತು. ಆ ಕಾಲಘಟ್ಟದಲ್ಲಿ ಮಹಿಳಾ ವಿದ್ವಾಂಸರುಗಳಾದ ಗಾರ್ಗಿ, ಮೈತ್ರೇಯಿ, ದಿಶಾ, ವಿದಿಶಾ, ಅತ್ರೇಯಿ ವಿಶ್ವಾವರಾ, ಸಂಖ್ಯಾ, ಸಂಜ್ಞಾ, ಇಳಾ, ಪ್ರತೀತಿ, ಮಾನಸ, ಪ್ರಜ್ಞಾ ಇನ್ನೂ ಮೊದಲಾದವರು ಇದ್ದುದು ಉಲ್ಲೇಖವಾಗಿದೆ.

ವೇದಗಳ ಅಂತ್ಯ ಕಾಲದಲ್ಲಿ ಮುನ್ನೆಲೆಗೆ ಬಂದ ಮನುಸ್ಮೃತಿ, ನಾರದ ಸ್ಮೃತಿಗಳು ಮಹಿಳೆಯರನ್ನು ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ವಂಚಿತರನ್ನಾಗಿ ಮಾಡಿದುದನ್ನು ಕಾಣುತ್ತೇವೆ.

ಆನಂತರ ಬಂದ ಜೈನಧರ್ಮವು ಮಹಿಳೆ ಮೋಕ್ಷಕ್ಕೆ ಅನರ್ಹಳೆಂದು ಸಾರಿತು. ಬೌದ್ಧ ಮತ ಸ್ಥಾಪಕ ಬುದ್ಧನೂ ಕೂಡ "ಧರ್ಮವೇದಿಕೆಗೆ" ಮಹಿಳೆಯರು ಅನರ್ಹರೆಂದು ಹೇಳುತ್ತಿದ್ದವನು

ನಂತರ ತನ್ನ ಚಿಕ್ಕಮ್ಮನ ಒತ್ತಾಯಕ್ಕೆ ಮಣಿದುದು ಉಲ್ಲೇಖವಾಗಿದೆ.

ಆರ್ಯರು, ಅನಾರ್ಯರುಗಳ ಸಂಘರ್ಷ ಮತ್ತು ಮುಸಲ್ಮಾನರುಗಳ ಆಕ್ರಮಣದ ಸಂದರ್ಭಗಳಲ್ಲಿ ಮಹಿಳೆ ಮತ್ತಷ್ಟು ತುಳಿತಕ್ಕೆ ಒಳಗಾಗುವುದು ಕಂಡುಬರುತ್ತದೆ. ಈ ರೀತಿ ಕಾಲ ಕಾಲಕ್ಕೆ ಹೀನಾಯ ಸ್ಥಿತಿಯನ್ನು ತಲುಪಿದ್ದ ಮಹಿಳೆಗೆ ಘನತೆ, ಗೌರವವನ್ನು ತಂದುಕೊಟ್ಟು ಸಮಾಜದ ಮುನ್ನೆಲೆಗೆ ಮಹಿಳೆಯರನ್ನು ಕರೆತಂದವರು ೧೨ನೇ ಶತಮಾನದ ಶಿವಶರಣರು.

ಶತ ಶತಮಾನಗಳಿಂದ ತುಳಿತಕ್ಕೆ, ಶೋಷಣೆಗೆ ಒಳಗಾಗಿ ಅಡುಗೆ ಮನೆಯ ಬಂಧಿಯಾಗಿ, ಪುರುಷನ ಭೋಗವಸ್ತುವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿದ್ದಂತಹ ಮಹಿಳೆಯನ್ನು ಅನುಭವಮಂಟಪವೆಂಬ ಸಮಾನವೇದಿಕೆಗೆ ಕರೆತಂದು ಪುರುಷನಷ್ಟೇ ಮಹಿಳೆ ಸಶಕ್ತಳು ಎಂಬುದನ್ನು ಜಗತ್ತಿಗೆ ಎತ್ತಿ ತೋರಿಸಿಕೊಟ್ಟ ಕೀರ್ತಿ ಬಸವಾದಿ ಶಿವಶರಣರಿಗೆ ಸಲ್ಲುತ್ತದೆ.

ಅನುಭವಮಂಟಪದಲ್ಲಿ ಪುರುಷರೊಂದಿಗೆ ವಯೋಭೇದವಿಲ್ಲದೆ, ಜಾತಿಭೇದವಿಲ್ಲದೆ ಸರಿಸಮಾನವಾಗಿ ಕುಳಿತು ವಾಕ್ ಸ್ವಾತಂತ್ರ್ಯಕ್ಕೆ ಅವಕಾಶ ಒದಗಿಸಿಕೊಟ್ಟ ಕಾರಣ ಬಸವೇಶ್ವರರು ಮತ್ತು ಅಲ್ಲಮ, ಚನ್ನಬಸವಣ್ಣ, ಶಿವಯೋಗಿ ಸಿದ್ಧರಾಮೇಶ್ವರರ ಪ್ರಭಾವದಿಂದ ಮುನ್ನೂರು ಮಹಿಳೆಯರು ಅನುಭವಮಂಟಪದಲ್ಲಿ ಪ್ರವೇಶ ಪಡೆದ ಪರಿಣಾಮವಾಗಿ ಏಕಕಾಲಕ್ಕೆ ೩೩ ಜನ ಮಹಿಳೆಯರು ಅದರಲ್ಲೂ ಕೆಳವರ್ಗದ ಮಹಿಳೆಯರು ಸ್ವತಂತ್ರವಾಗಿ ವಚನ ರಚಿಸಿರುವುದು ಜಗತ್ತಿನ ಕಣ್ಣು ತೆರೆಸಿದೆ.

ಒಂದು ಸಮಾಜ ಅವನತಿ, ಉನ್ನತಿಗೆ ಬರಲು ಮೂಢನಂಬಿಕೆ, ಅಜ್ಞಾನ, ಅಂಧಾನುಕರಣೆ, ಅನಕ್ಷರತೆ, ವರ್ಗಭೇದ, ವರ್ಣಭೇದ, ಲಿಂಗಭೇದಗಳು ಪ್ರಮುಖವಾಗಿ ಕಂಡುಬರುತ್ತವೆ. ಇಂಥ ಮೇಲರಿಮೆ-ಕೀಳರಿಮೆಯಿಂದ ಸಮಾಜ ಅವನತಿಯತ್ತ ಸಾಗುವ ಸ್ಥಿತಿಗೆ ಬಂದಾಗ ಬಂಡಾಯದ ಪ್ರತಿಭಟನೆಗಳು ಹುಟ್ಟಿಕೊಳ್ಳುವುದು ಸಾಮಾನ್ಯ. ಇಂತಹ ಸಂದರ್ಭದಲ್ಲಿ ಒಂದು ಸುಸಂಸ್ಕೃತ ಸಮಾಜ ನಿರ್ಮಾಣಕ್ಕೆ ನಮ್ಮ ಶರಣೆಯರ ವೈಚಾರಿಕ ನಿಲುವು ಅತಿ ಅದ್ಭುತವಾಗಿದೆ.

ಶರಣೆ ಸತ್ಯಕ್ಕನ ಕಾಯಕ ಶರಣರ ಬೀದಿಯಲ್ಲಿ ಬಿದ್ದಿದ್ದ ಕಸವನ್ನು ಗುಡಿಸುವುದು, ಆಕೆಯ ಕಾಯಕದ ಶ್ರೇಷ್ಠತೆಯನ್ನು ಕೆಳಗಿನ ವಚನದ ಮೂಲಕ ವ್ಯಕ್ತಪಡಿಸಿದ್ದಾಳೆ.

**ಲಂಚ ವಂಚನಕ್ಕೆ ಕೈಯಾನದ ಭಾಷೆ, ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದರೆ**
**ನಾನು ಕೈಮುಟ್ಟಿ ಎತ್ತಿದೆನಾದರೆ, ನಿಮ್ಮಾಣೆ ನಿಮ್ಮ ಪ್ರಮಥರಾಣೆ**
**ಅದೇನು ಕಾರಣವೆಂದರೆ, ನೀವಿಕ್ಕಿದ ಭಿಕ್ಷೆದಲ್ಲಿಪ್ಪೆನಾಗಿ**
**ಇಂತಲ್ಲದೆ ನಾನು ಅಳಿಮನವಮಾಡಿ ಪರದ್ರವ್ಯಕ್ಕೆ ಆಸೆ ಮಾಡಿದೆನಾದರೆ,**
**ನೀನಾಗಲೆ ಎನ್ನ ನರಕದಲ್ಲಿ ಅದ್ದಿ**
**ನೀನೆದ್ದು ಹೋಗಾ ಶಂಭುಜಕ್ಕೇಶ್ವರಾ ॥ ೧೨೨೭॥**

ನಾನು ಲಂಚ ಮತ್ತು ಅನ್ಯಾಯದ ಹಣವನ್ನು ಮುಟ್ಟುವುದಿಲ್ಲ ಎಂಬುದು ಸತ್ಯಕ್ಕನ ಸಂಕಲ್ಪ. ನಾನು ಕಸ ಗುಡಿಸುವಾಗ ದಾರಿಯಲ್ಲಿ ಚಿನ್ನವಾಗಲಿ ಮತ್ತಾವುದೇ ಬೆಲೆ ಬಾಳುವ ವಸ್ತುವಾಗಲಿ, ವಸ್ತ್ರವಾಗಲಿ ನಾನು ಕೈಯಾರೆ ಮುಟ್ಟುವುದಿಲ್ಲ. ಕಣ್ಣಿನಿಂದಲೂ ನೋಡುವುದಿಲ್ಲ. ಕಸವೆಂದು ಭಾವಿಸುವೆ. ಯಾವ ಕಾರಣಕ್ಕೂ ನಾನು ಪರದ್ರವ್ಯಕ್ಕೆ ಆಸೆಪಡುವುದಿಲ್ಲ. ಕಾಯಕದಿಂದ ಬಂದ ಸಂಪಾದನೆಯಲ್ಲದೆ ಅನ್ಯಾಯದ ಸಂಪಾದನೆಯನ್ನು ಯಾವ ಕಾರಣಕ್ಕೂ ನಿಮ್ಮಾಣೆ ಮತ್ತು ನಿಮ್ಮ ಪ್ರಮಥರ ಆಣೆಯಾಗಿಯೂ ಮುಟ್ಟಲಾರೆ ಎಂದು ಕಾಯಕ ಶ್ರದ್ಧೆಯನ್ನು ಮೆರೆಯುವ ಸತ್ಯಕ್ಕ ಶಂಭುಜಕ್ಕೇಶ್ವನರಲ್ಲಿ ಆಣೆ ಮಾಡುತ್ತಾಳೆ.

**ಅರ್ಚನೆ ಪೂಜನೆ ನೇಮವಲ್ಲ, ಮಂತ್ರ ತಂತ್ರ ನೇಮವಲ್ಲ;**
**ಧೂಪ ದೀಪಾರತಿ ನೇಮವಲ್ಲ:**
**ಪರ ಧನ, ಪರಸ್ತ್ರೀ ಪರ ದೈವಂಗಳಿಗೆರಗದಿಪ್ಪುದೆ ನೇಮ**



**ಶಂಭುಜಕ್ಕೇಶ್ವರನಲ್ಲಿ ಇವು ಕಾಣಿರಣ್ಣಾ ನಿತ್ಯ ನೇಮ,**

ಬಿಲ್ವಪತ್ರೆ, ವಿವಿಧ ಪುಷ್ಪಗಳನ್ನು ದೇವರ ಮುಡಿಗೇರಿಸಿ ಪೂಜೆಸಲ್ಲಿಸಿ ಮಂತ್ರ ತಂತ್ರ ವೇದಗಳನ್ನು ಬಾಹ್ಯವಾಗಿ ಪಠಿಸುತ್ತ ಧೂಪ ದೀಪಾರತಿಗಳನ್ನು ಬೆಳಗುವುದರ ಮೂಲಕ ನಾನು ದೇವರನ್ನು ಒಲಿಸಿಕೊಳ್ಳುತ್ತೇನೆ ಎಂದು ಹೇಳುವ ಅಜ್ಞಾನಿಗಳಿಗೆ ಸತ್ಯಕ್ಕ ಪರಧನಕ್ಕೆ ಆಸೆಮಾಡದಿರುವುದು ಪರಸ್ತ್ರೀಯರನ್ನು ಕಣ್ಣಿನಿಂದ ಮೋಹಿಸದೆ, ಮಹಾದೇವಿ ಎಂದು ಗೌರವಿಸುವುದು ಏಕದೇವತಾನಿಷ್ಠೆ ಮೆರೆಯುವುದೇ ನಿಜವಾದ ನಿತ್ಯ ನೇಮದ ಪೂಜೆ ಎಂದು ಅಜ್ಞಾನಿ ಮಾನವರಿಗೆಪೂಜೆಯ ಮಹತ್ವದ ಕಣ್ಣು ತೆರೆಸಿದ್ದಾಳೆ ಸತ್ಯಕ್ಕ.

ದಲಿತ ವಚನಕಾರ್ತಿ ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ಕಾಯಕದ ಘನತೆಯನ್ನು ಕುರಿತು ಭಕ್ತರು ಹೇಗಿರಬೇಕೆಂದು ಕೆಳಗಿನ ವಚನದಲ್ಲಿ ಎಚ್ಚರಿಸಿದ್ದಾಳೆ.

**ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ,**
**ಸತ್ಯ ಶುದ್ಧವಿಲ್ಲದುದು ಕಾಯಕವಲ್ಲ,**
**ಆಸೆಯೆಂಬುದು ಭವದ ಬೀಜ,**
**ನಿರಾಸೆಯೆಂಬುದು ನಿತ್ಯಮುಕ್ತಿ,**
**ಉರಿಲಿಂಗ ಪೆದ್ದಿಗಳರಸನಲ್ಲಿ ಸದರವಲ್ಲ ಕಾಣವ್ವಾ ॥ ೭೩೪ ॥**

ಶಿವಭಕ್ತನಾದವನು ಪ್ರತಿನಿತ್ಯ ಕಾಯಕವನ್ನು ತಪ್ಪದೆ ಮಾಡಲೇಬೇಕು. ಕಾಯಕದಲ್ಲಿ ನಿರತರಾದವರು ಮೋಸ, ವಂಚನೆ ಇಲ್ಲದೆ ಸತ್ಯ ಶುದ್ಧ ಮನಸ್ಸಿನಿಂದ ಮಾಡುವುದು ಮಾತ್ರ ಕಾಯಕವೆನಿಸುವುದು. ಆಸೆಗೆ ಒಳಗಾದ ಮಾನವ ಮಾಡಬಾರದ ಕೆಟ್ಟ ಕೆಲಸಗಳನ್ನು ಮಾಡಿ ಜನ್ಮವನ್ನು ವ್ಯರ್ಥಮಾಡಿಕೊಂಡಿದ್ದಾನೆ. ಆಸೆಯಿಂದ ದೂರ ಉಳಿದ ಮನುಷ್ಯ ನಿತ್ಯವೂ ಸುಖಿಯಾಗಿರುತ್ತಾನೆ ಎಂದು ದುರಾಸೆಯುಳ್ಳ ಭಕ್ತರಿಗೆ ಉರಿಲಿಂಗ ಪೆದ್ದಿಗಳ ಪುಣ್ಯ ಸ್ತ್ರೀ ಕಾಳವ್ವೆ ಚಾಟಿ ಬೀಸಿದ್ದಾಳೆ.

**ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ,**
**ವ್ರತ ಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ,**
**ಅರಿಯದುದು ಹೋಗಲಿ, ಅರಿದು ಬೆರೆದೆನಾದಡೆ**
**ಒಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ. ॥ ೭೫೧ ॥**

ಶರಣೆ ಕೊಟ್ಟಣದ ಸೋಮಮ್ಮ ನಿರ್ಲಜ್ಜೇಶ್ವರಾ ಅಂಕಿತದಲ್ಲಿ ಒಂದೇ ಒಂದು ವಚನವನ್ನು ರಚಿಸಿದ್ದಾಳೆ. ಒರಳು ಕಲ್ಲಿನಲ್ಲಿ ಭತ್ತವನ್ನು ಕುಟ್ಟುವಾಗ ಹದವರಿತು ಕುಟ್ಟಿದರೆ ಮಾತ್ರ ಅಕ್ಕಿ ಬರುತ್ತದೆ. ಹದಮೀರಿ ಕುಟ್ಟಿದರೆ ಅಕ್ಕಿನುಚ್ಚಾಗುವುದು ಎನ್ನುವ ಸೋಮಮ್ಮ ವ್ರತದಾರಿಗಳನ್ನು ಕೂಡಿದರೆ ಮುಕ್ತಿ ದೊರೆಯುತ್ತದೆ. ವ್ರತಹೀನರ ಸಂಗಮಾಡಿದರೆ ನರಕವೇ ಪ್ರಾಪ್ತಿಯಾಗುವುದು. ವ್ರತ, ಆಚಾರ, ನಿಷ್ಠೆ, ಪ್ರಾಮಾಣಿಕತೆ, ಶ್ರದ್ಧೆಗಳು ಕಾಯಕದಲ್ಲಿ ಇಲ್ಲದಿದ್ದರೆ ಒದಗಬಹುದಾದ ಅನಾಹುತಗಳನ್ನು ಕಾಯಕದ ದೃಷ್ಟಾಂತದ ಮೂಲಕ ವರ್ಣಿಸುವ ಕೊಟ್ಟಣದ ಸೋಮಮ್ಮ ತನ್ನ ವೃತ್ತಿಯ ಪರಿಭಾಷೆಯಲ್ಲಿ ಕಾಯಕದ ಮಹತ್ವವನ್ನು ತಿಳಿಸಿದ್ದಾಳೆ.

ಶರಣ ಶರಣೆಯರ ಕಾಯಕದ ದೃಷ್ಟಿ ಧನ, ಧಾನ್ಯ, ದ್ರವ್ಯಗಳನ್ನು ಸಂಗ್ರಹಣೆಮಾಡಿ ತಮ್ಮ ಸ್ವಾರ್ಥದ ಜೀವನ ನಡೆಸುವುದಾಗಿರಲಿಲ್ಲ, ಅದು ಲೌಕಿಕದ ಹಿತಕ್ಕಾಗಿ ಆಧ್ಯಾತ್ಮದತ್ತ ಸಾಗುವಂತದ್ದಾಗಿತ್ತು.

**ಮೊಲೆ ಮುಡಿ ಬಂದಡೆ ಹೆಣ್ಣೆಂಬರು,**
**ಮೀಸೆಕಾಸೆ ಬಂದಡೆ ಗಂಡೆಂಬರು**
**ಈ ಉಭಯದ ಜ್ಞಾನ**
**ಹೆಣ್ಣೊ ಗಂಡೊ ನಾಸ್ತಿನಾಥಾ? ॥ ೭೭೮ ॥**

ಶರಣೆ ಗೊಗ್ಗವ್ವೆ ಮೊಲೆಮುಡಿ ಬಂದವರನ್ನು ಹೆಣ್ಣು ಎಂತಲು, ಮೀಸೆ ಕಾಸೆ ಬಂದವರನ್ನು

ಗಂಡು ಎಂದು ಗುರುತಿಸಲಾಗುತ್ತಿದೆ. ಆದರೆ ಈ ಈರ್ವರ ದೇಹದಲ್ಲಿರುವ ಆತ್ಮ ಒಂದೇ ಆಗಿರುವುದು ಎಂದು ಹೇಳಿ, ಹೆಣ್ಣು ಮತ್ತು ಗಂಡಿನಲ್ಲಿರುವ ಸಮಾನತೆಯನ್ನು ಗೊಗ್ಗವ್ವೆ ಸಮಾಜಕ್ಕೆ ಎತ್ತಿ ತೋರಿಸಿಕೊಟ್ಟು ತನ್ನ ಬುದ್ಧಿಯ ಪ್ರೌಢಿಮೆಯನ್ನು ಮೆರೆದಿದ್ದಾಳೆ.

**ಗಂಡು ಮೋಹಿಸಿ ಹೆಣ್ಣ ಹಿಡಿದಡೆ**
**ಅದು ಒಬ್ಬರ ಒಡವೆ ಎಂದು ಅರಿಯಬೇಕು**
**ಹೆಣ್ಣು ಮೋಹಿಸಿ ಗಂಡ ಹಿಡಿದಡೆ**
**ಉತ್ತರವಾವುದೆಂದರಿಯಬೇಕು ?**
**ಈ ಎರಡರ ಉಭಯವ ಕಳೆದು ಸುಖಿತನಾಗಬಲ್ಲಡೆ,**
**ನಾಸ್ತಿನಾಥನು ಪರಿಪೂರ್ಣನೆಂಬೆ.** ‖ ೭೭೫ ‖

ಈ ವಚನದ ಮೂಲಕ ಗೊಗ್ಗವ್ವೆ ಸ್ತ್ರೀ ಮತ್ತು ಪುರುಷರ ಸಮನ್ವಯತೆಯನ್ನು ಗುರುತಿಸುವ ಜವಾಬ್ದಾರಿಯನ್ನು ಸಮಾಜಕ್ಕೆ ಬಿಟ್ಟಿದ್ದಾಳೆ. ಗಂಡು ಮೋಹಿಸಿದ ಹೆಣ್ಣನ್ನು ಅದು ಒಬ್ಬರ ಒಡವೆ ಎಂದು ತಿಳಿಯಬೇಕು, ಹೆಣ್ಣು ಮೋಹಿಸಿ ಗಂಡ ಹಿಡಿದರೆ ಅದರ ಉತ್ತರವನ್ನು ಸಮಾಜವೆ ಹೇಳಬೇಕೆಂದು ತಿಳಿಸಿದ್ದಾಳೆ.

**ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ,**
**ಭಾವ ಶುದ್ಧವಾಗಿ ಮಹಾಶರಣರ**
**ತಿಪ್ಪೆಯ ತಪ್ಪಲ ಅಕ್ಕಿಯ ತಂದು**
**ನಿಶ್ಚೈಸಿಮಾಡಬೇಕು ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ**
**ಬೇಗ ಹೋಗು ಮಾರಯ್ಯಾ; ಲಕ್ಕಮ್ಮ.** (೭೧೨)

ಕಾಯಕದ ವಿಷಯಕ್ಕೆ ಬಂದರೆ ಆಯ್ದಕ್ಕಿ ಲಕ್ಕಮ್ಮನ ಹೆಸರು ಪ್ರಮುಖವಾಗಿ ಕೇಳಿಬರುತ್ತದೆ, ಪತಿ ಮಾರಯ್ಯನು ಅನುಭವಮಂಟಪದಲ್ಲಿ ನಡೆಯುತ್ತಿದ್ದ ಚಿಂತನಾ ಚರ್ಚೆಯಲ್ಲಿ ಮನ ಮಗ್ನನಾಗಿದ್ದು ಎಂದಿನಂತೆ ಅಕ್ಕಿಯನ್ನು ಆಯ್ದುಕೊಂಡು ಹೋಗುವ ಕಾಯಕವನ್ನು ಮರೆತಿದ್ದಾನೆ ಸಮಯಕ್ಕೆ ಸರಿಯಾಗಿ ಪತಿ ಮಾರಯ್ಯನವರು ಪ್ರಸಾದಕ್ಕೆ ಅಕ್ಕಿಯನ್ನು ಆಯ್ದು ತರುವುದು ತಡವಾದಾಗ, ಸುಸಂಸ್ಕೃತಳಾದ ಶರಣೆ ಲಕ್ಕಮ್ಮ ಅನುಭವ ಮಂಟಪದ ಬಾಗಿಲಲ್ಲಿ ನಿಂತುಕೊಂಡು ಗೌರವಯುತವಾಗಿ ಪತಿ ಮಾರಯ್ಯನ್ನು ಎಚ್ಚರಿಸುತ್ತಾಳ. ಎನ್ನ ಪತಿರಾಯನೆ ಇಂದು ಕಾಯಕಕ್ಕೆ ವೇಳೆಯಾಗಿದೆ ಬೇಗನೆ ಹೋಗಿ ಶುದ್ಧ ಮನಸ್ಸಿನಿಂದ ಮಹಾಮನೆಯ ಅಂಗಳದಲ್ಲಿ ಬಿದ್ದಿರುವ ಅಕ್ಕಿಯನ್ನು ಆಯ್ದುಕೊಂಡು ಬನ್ನಿ. ಅಮರೇಶ್ವರ ಲಿಂಗಕ್ಕೆ ಪ್ರಸಾದ ಅರ್ಪಿಸುವ ಸಮಯ ಮೀರುತ್ತಿದೆ. ಅಕ್ಕಿಯನ್ನು ಆಯ್ದು ತರುವ ಕಾಯಕಕ್ಕೆ ಬೇಗನೆ ಹೋಗುವಂತೆ ಲಕ್ಕಮ್ಮ ತಿಳಿಸುತ್ತಾಳೆ.

**ಆಸೆಯೆಂಬುದು ಅರಸಿಂಗಲ್ಲದೆ**
**ಶಿವ ಭಕ್ತರಿಗುಂಟೆ ಅಯ್ಯಾ ?**
**ರೋಷವೆಂಬುದು ಯಮದೂತರಿಗಲ್ಲದೆ**
**ಅಜಾತರಿಗುಂಟೆ ಅಯ್ಯಾ ?**
**ಈಸಕ್ಕಿಯಾಸೆ ನಿಮಗೇಕೆ ? ಈಶ್ವರನೊಪ್ಪ.**
**ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ**
**ದೂರ ಮಾರಯ್ಯ.** (೭೦೯)

ಕಾಯಕಕ್ಕೆ ವೇಳೆಯಾಗಿದೆ ಎಂದು ಕಾತುರದಿಂದ ಬಾಗಿಲಲ್ಲೇ ಪತಿಯ ಆಗಮನದ ನಿರೀಕ್ಷೆಯಲ್ಲೇ ಇದ್ದ ಲಕ್ಕಮ್ಮ, ಆ ದಿನ ಹೆಚ್ಚಿನ ಅಕ್ಕಿಯನ್ನು ಆಯ್ದು ತಂದಿರುವುದನ್ನು ನೋಡಿ ಮಾರಯ್ಯನನ್ನು ಎಚ್ಚರಿಸುತ್ತಾಳೆ. ರಾಜ್ಯವನ್ನಾಳುವ ಅರಸರಿಗೆ ಮಾತ್ರ ಆಸೆ ಇರುವುದು. ಶಿವಭಕ್ತರಾದ ನಿಮಗೇಕೆ ಈ ದುರಾಸೆಬಂತು? ಇಷ್ಟೊಂದು ಅಕ್ಕಿಯನ್ನು ಆಯ್ದು ತಂದಿರುವಿರಲ್ಲ,



ಬೇಗನೆ ಹೋಗಿ ಎಲ್ಲಿ ತಂದಿರುವಿರೊ ಅಲ್ಲಿಗೆ ಹೋಗಿ ಸುರಿದು ಬನ್ನಿ ಎಂದು ಲಕ್ಕಮ್ಮ ಮಾರಯ್ಯನಿಗೆ ಎಚ್ಚರಿಸುತ್ತಾಳೆ.

**ಒಮ್ಮನವ ಮೀರಿ ಇಮ್ಮನದಿ ತಂದಿರಿ**
**ಇದು ನಿಮ್ಮ ಮನವೊ, ಬಸವಣ್ಣನ ಅನುಮಾನದ ಚಿತ್ತವೊ ?**
**ಈ ಮಾತು ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ಸಲ್ಲದ ಬೋನ**
**ಅಲ್ಲಿಯೇ ಸುರಿದು ಬನ್ನಿ ಮಾರಯ್ಯಾ,** (೭೧೧)

ಒಂದು ಮನಸ್ಸಿನಿಂದ ನೀವು ಈ ದಿನ ಕಾಯಕ ಮಾಡಿಕೊಂಡು ಬಂದಿಲ್ಲ. ಎರಡು ಮನಸ್ಸಿನಿಂದ ತಂದಿದ್ದೀರಿ. ಇದು ನಿಮ್ಮ ಸ್ವಂತ ಮನಸ್ಸೊ, ಇಲ್ಲವೆ ಬಸವಣ್ಣನವರ ಚಿತಾವಣೆಯೊ? ಎಂದು ಪ್ರಶ್ನಿಸುವ ಲಕ್ಕಮ್ಮ, ಇದರಿಂದ ತಯಾರಿಸಿದ ಪ್ರಸಾದ ಅಮರೇಶ್ವರ ಲಿಂಗಕ್ಕೆ ಸಲ್ಲತಕ್ಕದ್ದಲ್ಲ, ಹೆಚ್ಚಾಗಿ ತಂದಿರುವ ಅಕ್ಕಿಯನ್ನು ಅಲ್ಲಿಗೇ ಹೋಗಿ ಸುರಿದುಬರುವಂತೆ ವಾಪಾಸು ಕಳಿಸಿಕೊಡುತ್ತಾಳೆ. ಅದೇ ಇಂದಿನ ನಮ್ಮ ಸ್ತ್ರೀಯರು ಅಕ್ಕ–ಪಕ್ಕದವರ ನೆರೆ ಹೊರೆಯವರ ಶ್ರೀಮಂತಿಕೆಯನ್ನು, ಆಡಂಬರದ ಜೀವನ ಶೈಲಿಯನ್ನು ನೋಡಿ ನಾವೂ ಏಕೆ ಆ ರೀತಿ ಆಗಬಾರದೆಂದು ದುರಾಸೆಗೆ ಒಳಗಾಗಿ ಗಂಡಂದಿರನ್ನು ಅಕ್ರಮ ಸಂಪಾದನೆಗೆ ಗುರಿಪಡಿಸಿ, ಅನ್ಯಾಯದ ಸಂಪಾದನೆಯಿಂದ ತಾವು ವೈಭೋಗದ ಜೀವನಕ್ಕಿಳಿಯುವ ಸ್ತ್ರೀಯರೆತ್ತ? ಶಿವ ಶರಣೆಯರ ಜೀವನವೆತ್ತ? ಎಂಬುದನ್ನು ಇಂದಿನ ನಮ್ಮ ಸ್ತ್ರೀಯರು ತಿಳಿದರೆ ಸುಖ ಸಂಸಾರಕ್ಕೆ ಮಾರ್ಗವಾಗುವುದು.

**ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ**
**ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ**
**ಸದ್ಭಕ್ತಂಗೆ ಎತ್ತನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು**
**ಮಾರಯ್ಯ ಪ್ರಿಯ ಅಮರೇಶ್ವರ ಲಿಂಗದ ಸೇವೆಯುಳ್ಳನ್ನಕ್ಕರ** (೭೨೪)

ಅಶುದ್ಧ ಮನಸ್ಸಿನಿಂದ ಶಿವನನ್ನು ನೆನೆದು ಯಾವುದೇ ಕಾಯಕ ಮಾಡಿದರು, ಅದರಿಂದ ಒಳ್ಳೆಯದಾಗುವುದಿಲ್ಲ. ಸತ್ಯ ಶುದ್ಧವಾದ, ಪರಿಶುದ್ಧವಾದ ಮನಸ್ಸಿನಿಂದ ಯಾವ ಕಾಯಕ ಮಾಡಲಿ ಬಡತನಕ್ಕೆ ಕೊರತೆಯಾಗುವುದಿಲ. ದುರ್ಬುದ್ಧಿ, ದುರುದ್ದೇಶ, ದುಷ್ಟತನದಿಂದ ಯಾವ ಕಾಯಕ ಮಾಡಿದರೂ ದಾರಿದ್ರ್ಯ ತಪ್ಪದು ಎಂಬ ಮಾತು ಈ ವಚನದಿಂದ ಸ್ಪಷ್ಟವಾಗುತ್ತದೆ.

ಕಾಯಕ ತತ್ವದಲ್ಲಿ ಪ್ರಮುಖಳು, ಪ್ರಸಿದ್ಧಳು ಆದ ಲಕ್ಕಮ್ಮನ ಜೀವನ ಪ್ರತಿಯೊಬ್ಬರಿಗೂ ಆದರ್ಶ. ಆಕೆಯ ವಚನದ ಮೂಲಕ ತಿಳಿದುಬರುವ ಸಂಗತಿ ಸತಿಪತಿಯ ಜೀವನವನ್ನು ಅರ್ಥಾತ್ ಬದುಕನ್ನು ನಿಯಂತ್ರಣಗೊಳಿಸಬಲ್ಲಳು ಮತ್ತು ಕುಟುಂಬವನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ಯಬಲ್ಲಳು. ಕುಟುಂಬದ ಅಭಿವೃದ್ಧಿಯಾಗಲು, ಅವನತಿಯಾಗಲು, ಕಾರಣಳಾಗಬಲ್ಲಳು ಎನ್ನುವುದು. “ಇದು ನಿಮ್ಮ ಮನವೊ ಬಸವಣ್ಣನ ಅನುಮಾನದ ಚಿತ್ತವೊ” ಎಂದು ಸೂಕ್ಷ್ಮವಾಗಿ ತಿಳಿಸಿ ಕೊನೆಗೆ ಅಲ್ಲಿಯೇ ಸುರಿದು ಬನ್ನಿ ಎಂದು ಕಳಿಸಿದುದು ಲಕ್ಕಮ್ಮನ ಅಂತರಂಗ ಮತ್ತು ಬಹಿರಂಗದ ಸ್ಪಷ್ಟತೆಯನ್ನು ತೋರಿಸುತ್ತದೆ. ಇಂದು ಅನೇಕ ಸ್ತ್ರೀಯರು ತಮ್ಮ ಪತಿಯನ್ನು ಅಕ್ರಮ ಸಂಪಾದನೆಗಿಳಿಸಿ ಸೆರೆಮನೆ ಸೇರುವಾಗ ಕಣ್ಣೀರಿಡುವುದನ್ನು ಕಾಣುತ್ತೇವೆ. ಶರಣೆಯರು (ವಚನಕಾರ್ತಿಯರು) ಧಾರ್ಮಿಕ, ಸಾಮಾಜಿಕ, ಆರ್ಥಿಕ ತಿಳುವಳಿಕೆಯನ್ನು, ಆಧ್ಯಾತ್ಮ ಬೋಧನೆ, ತತ್ವ, ವ್ರತ, ನೇಮ, ನಿಷ್ಠೆ, ಚಿಂತನೆ, ಕಾಯಕತತ್ವ, ಆಚಾರಗಳನ್ನು ಅರಿವನ್ನು ಮೂಡಿಸುತ್ತಾರೆ, ತಮ್ಮ ತನದ ಶೋಧನೆ ಆತ್ಮ ಪರಿವೀಕ್ಷಣೆ ಮಾಡಿಕೊಳ್ಳುವ ದಿಸೆಯಲ್ಲಿ ಅನುಭಾವಿಕ ಆಸಕ್ತಿ ಹೊಂದಿರುವುದು ಕಂಡುಬರುತ್ತಿದೆ, ಶರಣ ಶರಣೆಯರು ತಾವಷ್ಟೇ ಉದ್ಧಾರವಾಗುವುದಲ್ಲ, ಇತರರನ್ನೂ ಉದ್ಧಾರ ಮಾಡುವ ನಿಸ್ವಾರ್ಥಿಗಳು.

## ಭಾರತ ಕೋಮು ಸೌಹಾರ್ದ ಪ್ರಶಸ್ತಿ ಪಡೆದ

# ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು

**ಶ್ರೀ ಎಂ. ಚೆನ್ನನಾಗರಾಜ್**

*ಮಾಜಿ ಬ್ಯೂರೋ ಮುಖ್ಯಸ್ಥರು*
*ಯು.ಎನ್.ಐ. ವಾರ್ತಾ ಸಂಸ್ಥೆ, (ನವದೆಹಲಿ)*
*ಶಾರದಾ ನಿವಾಸ, ೧೯೭/೨೩, ೩ನೇ ಮುಖ್ಯರಸ್ತೆ,*
*ವಯಾಲಿಕಾವಲ್, ಬೆಂಗಳೂರು- ೫೬೦ ೦೦೩*
*೨೨೬೦೨ ೮೨೯೩೨*

ನನ್ನ ವರದಿಗಾರಿಕೆ ದಿನಗಳ ಹಳೆಯ ನೆನಪುಗಳಲ್ಲಿ ಮೊದಲ ಬಾರಿಗೆ ಡಂಬಳ-ಗದಗ ಜಗದ್ಗುರುಗಳಾದ ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ದರ್ಶನದ ಭಾಗ್ಯ ಮರೆಯಲು ಅಸಾಧ್ಯವಾಗುವಂತಹುದು. ಅದೂ ಸಹ ರಾಷ್ಟ್ರದ ರಾಜಧಾನಿ ದೆಹಲಿಯಲ್ಲಿ.

ಶ್ರೀ ಶ್ರೀ ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ ಶ್ರೀಗಳವರು ಅದಾಗಲೇ ಅಂದಿನ ರಾಷ್ಟ್ರಪತಿ ಅಬ್ದುಲ್ ಕಲಾಂರವರಿಂದ ಭಾರತ ಕೋಮು ಸೌಹಾರ್ದದ ಪ್ರಶಸ್ತಿ ಸ್ವೀಕರಿಸಿದ ಹಸಿ ದಿನಗಳವು. ಅಂದಿನ ದಿನಗಳಲ್ಲಿ (೨೦೦೩) ಕರ್ನಾಟಕ ಸರ್ಕಾರದ ವಿಶೇಷ ಪ್ರತಿನಿಧಿಗಳಾಗಿ ಶಾಸಕರಾಗಿದ್ದ ಟಿ.ಬಿ. ಜಯಚಂದ್ರ ಅವರು ದೆಹಲಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಬೆಳಗಿನ ವೇಳೆ ಪತ್ರಿಕಾಗೋಷ್ಠಿಯೊಂದನ್ನು ಕರೆದಿದ್ದರು. ಆ ಸಂದರ್ಭದಲ್ಲಿ ಅದಾಗಲೇ ರಾಷ್ಟ್ರಮಟ್ಟದ ಪ್ರಶಸ್ತಿ ಸ್ವೀಕರಿಸಿದ ಶ್ರೀಗಳವರಿಗೆ ರಾಜ್ಯಸರ್ಕಾರದ ವತಿಯಿಂದ ಅಭಿನಂದನಾ ಸಮಾರಂಭ ಇರಿಸಿಕೊಂಡಿರುವ ವಿಷಯವನ್ನು ಪತ್ರಕರ್ತರಿಗೆ ತಿಳಿಸಿ ಸಂಜೆಯ ವೇಳೆಗೆ ಬಿಡುವು ಮಾಡಿಕೊಂಡು ಈ ಸಭೆಯಲ್ಲಿ ಭಾಗವಹಿಸಲು ಆಹ್ವಾನಿಸಿದರು.

ನಾನು ವಾರ್ತಾಸಂಸ್ಥೆಯ ವರದಿಗಾರನ ಜೊತೆಗೆ ಸ್ನಾತಕ ಹಾಗೂ ಸ್ನಾತಕೋತ್ತರ ವಿಷಯದಲ್ಲಿ ಕನ್ನಡದ ವಿದ್ಯಾರ್ಥಿಯಾಗಿದ್ದವನು. ನನ್ನ ತಂದೆಯವರಾದ ಕನ್ನಡದ ನಿವೃತ್ತ ಪ್ರಾಧ್ಯಾಪಕ ಪ್ರೊ॥ ಸಿ. ಮಹಾದೇವಪ್ಪನವರು ಆ ಸಮಯದ ಆಸುಪಾಸಿನಲ್ಲಿ ಅಲ್ಲಮಪ್ರಭುಗಳ ವಚನಗಳನ್ನು ವಿಜಯನಗರ ಕಾಲದ ಸಂಸ್ಕೃತ ವಿದ್ವಾಂಸರಾಗಿದ್ದ ಮಗ್ಗೆಯ ಮಾಯಿದೇವರು, ಸಂಸ್ಕೃತ ಭಾಷೆಗೆ ಅನುವಾದ ಮಾಡಿದ್ದ 'ಪ್ರಭುಗೀತಾ'ವನ್ನು ತಾಡವೋಲೆಯಿಂದ ಪುಸ್ತಕದ ರೂಪಕ್ಕೆ ತಂದಿದ್ದರು. ಈ ತಾಡವೋಲೆ ಅವರಿಗೆ ದೊರಕಿದ್ದ ಏಕೈಕ ಹಸ್ತಪ್ರತಿ. ಅದೂ ಸಹ ಗೆದ್ದಲಿಗೆ ಸಿಕ್ಕಿಕೊಳ್ಳುವ ಹಂತದಲ್ಲಿ ಅವರಿಗೆ ದೊರಕಿತ್ತು. ಭಾಷೆ ಸಂಸ್ಕೃತವಾಗಿದ್ದರೂ ಸಹ ಆ ಹೊತ್ತಗೆ ಇದ್ದದ್ದು ಕನ್ನಡ ಲಿಪಿಯಲ್ಲೇ. ತಂದೆಯವರ ಸಂಸ್ಕೃತ ಭಾಷಾಭ್ಯಾಸವೂ ಸಹ ಕನ್ನಡದ ಲಿಪಿಯಲ್ಲೇ ಮಾಡಿದ್ದು, ಹೀಗಾಗಿ ಸಂಸ್ಕೃತ ಭಾಷೆಯಲ್ಲೇ. ಒಂದು ರೀತಿ ಅನುಕೂಲ -ವಾದರೆ ಇನ್ನೊಂದೆಡೆ ಸಂಸ್ಕೃತ ಭಾಷೆಯಲ್ಲಿ ಗ್ರಂಥ ತಂದಾಗ ಎಲ್ಲಿ ತಪ್ಪುಗಳಾಗಬಹುದು ಎಂಬ ಕಳವಳ ಹಾಗೂ ಕಸಿವಿಸಿ.



ತಂದೆಯವರು ಚಿಕ್ಕಮಗಳೂರಿನ ಫಸ್ಟ್‌ಗ್ರೇಡ್ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದಾಗ ನಾನು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿ. ಆ ಊರಿನ ಸಂಸ್ಕೃತ ಬಲ್ಲ ಪಂಡಿತರೊಬ್ಬರ ಸಹಾಯದಿಂದ ಸಂಸ್ಕೃತ ಲಿಪಿಯಲ್ಲಿ ಬರೆಯಿಸುತ್ತಿದ್ದರು. ಈ ಕೆಲಸ ನನ್ನ ನೆನಪಿನಲ್ಲಿರುವಂತೆ ಕನಿಷ್ಠ ಎರಡು ವರ್ಷಗಳು ತೆಗೆದುಕೊಂಡಿರಬೇಕು. ಈ ಹಸ್ತಪ್ರತಿಯನ್ನು ಆಗಾಗ ತಂದೆಯವರು ತಿದ್ದುಪಡಿಗಳನ್ನು ಮಾಡುವುದೇ ಮುಂತಾದ ಸಂಪಾದನಾ ಕಾರ್ಯವನ್ನು ಅವರು ಬೆಂಗಳೂರಿಗೆ ವರ್ಗವಾಗಿ ಬಂದಾದ ಮೇಲೆಯೂ ಈ ಹಸ್ತಪ್ರತಿಯನ್ನು ಹಲವಾರು ಬಾರಿ ಪರಿಷ್ಕರಿಸಿದ್ದರು. ಇಷ್ಟಾದರೂ ಸಹ ಅವರ ಮನಸ್ಸಿನಲ್ಲಿ ಸ್ವಲ್ಪ ಅಳುಕು. ತಪ್ಪಾದರೆ ಎಲ್ಲಿ ವಿದ್ವಾಂಸರು ಪರಿಹಾಸ್ಯ ಮಾಡುವರೋ ಎಂಬ ಶಂಕೆ ಅವರಲ್ಲಿರಬೇಕು.

ಈ ಸಂದರ್ಭದಲ್ಲಿ ತಂದೆಯವರು ಶತಾವಧಾನಿಗಳೆಂದು ಪ್ರಸಿದ್ಧ ಯುವಸಂಸ್ಕೃತ ವಿದ್ವಾಂಸರೊಬ್ಬರ ಸಹಕಾರ ಕೋರಿದಾಗ ಅವರು ಮುಂದಿನ ಆರೆಂಟು ತಿಂಗಳುಗಳ ಅವಧಿಯವರೆಗೂ ಬಿಡುವಾಗಲು ಸಾಧ್ಯವೇ ಇಲ್ಲ ಎಂದು ಕೈ ಕೊಡವಿಬಿಟ್ಟರು.

ನಾನು ರಾಷ್ಟ್ರಮಟ್ಟದ ವಾರ್ತಾಸಂಸ್ಥೆಯಲ್ಲಿ ದೆಹಲಿಯಲ್ಲಿ ಕೆಲಸ ಮಾಡುತ್ತಿದ್ದಾಗ ಒಬ್ಬಂಟಿ ಜೀವನದ ಸಂದರ್ಭದಲ್ಲಿ ನಾನು ಹಾಗೂ ಇಬ್ಬರು ಸಹೋದ್ಯೋಗಿಗಳಾದ ಶ್ರೀ ಪ್ರಕಾಶ್ ಶರ್ಮ ಹಾಗೂ ಮಹೇಶ್‌ಕುಮಾರ್ ಸಿನ್ಹಾ ಅವರು ಬಾಡಿಗೆ ಮನೆಯೊಂದರಲ್ಲಿ ವಾಸಿಸುತ್ತಿದ್ದೆವು. ಶ್ರೀ ಪ್ರಕಾಶರು ವಿದ್ಯಾರ್ಥಿ ಜೀವನದಲ್ಲಿ ಸಂಸ್ಕೃತಾಭ್ಯಾಸದಲ್ಲಿ ಪರಿಣತರು. ವಿದ್ಯೆ ಕಲಿತದ್ದು ವಾರಣಾಸಿಯಲ್ಲಿ. ಪ್ರಭುಗೀತಾ ಹೊರಗೆ ಬರುವ ಸಂದರ್ಭದಲ್ಲಿ ನನಗಿದ್ದ ಕಳವಳವನ್ನು ಗಮನಿಸಿದ ಅವರು ವಾರಣಾಸಿಯಲ್ಲಿ ತಮ್ಮ ವಿದ್ಯಾಗುರುಗಳಾದ ಮಹಾ ಮಹೋಪಾಧ್ಯಾಯ ಡಾ॥ ಸೀತಾರಾಮ ಶಾಸ್ತ್ರಿಗಳಲ್ಲಿ ನನ್ನನ್ನು ಹಾಗೂ ನನ್ನ ತಂದೆಯವರನ್ನು ಕಾಶಿಯಲ್ಲಿ ಭೇಟಿ ಮಾಡಿದರೆ ಸಹಾಯ ದೊರಕಬಹುದೆಂದು ಕಳುಹಿಸಿಕೊಟ್ಟರು.

ಕಾಶಿಯಲ್ಲಿ ಡಾ॥ ಸೀತಾರಾಮ ಶಾಸ್ತ್ರಿಯವರನ್ನು ಭೇಟಿ ಮಾಡಿದಾಗ ಅವರ ಆರೋಗ್ಯ ಅಷ್ಟೇನೂ ಸರಿಯಾಗಿರಲಿಲ್ಲ. ಆದರೂ ಸಹ ಅವರು ಪ್ರಭುಗೀತಾದ ಸಂಪಾದಿತ ಪ್ರತಿಯನ್ನು ನೋಡಿ ಅತೀವ ಸಂತೋಷ ವ್ಯಕ್ತಪಡಿಸಿ ಅವರ ಅಭಿಪ್ರಾಯವನ್ನೂ ದಯಪಾಲಿಸಿದರು.

ಇದೇ ಸಂದರ್ಭದಲ್ಲಿ ನಾನು ಕೆಲಸ ಮಾಡುತ್ತಿದ್ದ ವಾರ್ತಾ ಸಂಸ್ಥೆಯ ಸಹೋದ್ಯೋಗಿ ಯವರು ಈ ಬಗ್ಗೆ ಆಮೂಲಾಗ್ರವಾಗಿ ತೋರಿಸಲು ಇಚ್ಛಿಸಿದರೆ ವಾರಣಾಸಿಯಲ್ಲೇ ಹಿರಿಯ ವಿದ್ವಾಂಸರೂ ಪ್ರಸಿದ್ಧ ಯೋಗ ಗುರುಗಳೂ ಆದ ವಾಗೀಶ ಶಾಸ್ತ್ರಿಯವರನ್ನು ಭೇಟಿ ಮಾಡಲು ಸಲಹೆ ಮಾಡಿದರು. ಅಂದಿನ ದಿನಗಳಲ್ಲಿ ಶ್ರೀ ವಾಗೀಶ ಶಾಸ್ತ್ರಿಗಳು ಪಾಶ್ಚಾತ್ಯ ಸಂಗೀತಗಾರ್ತಿ ಮಡೋನಾಳಿಗೆ ಸಂಸ್ಕೃತ ಕಲಿಸಿಕೊಟ್ಟ ಕಾರಣ, ಅವರ ಹೆಸರು ಪತ್ರಿಕೆಗಳಲ್ಲಿ ಹಾಗೂ ಮಾಧ್ಯಮಗಳಲ್ಲಿ ಹೆಸರುವಾಸಿಯಾಗಿದ್ದರು. ಪಾಣಿನಿಯ ಅಷ್ಟಾಧ್ಯಾಯಿ ಬಗ್ಗೆ ಬರೆದ ಅವರ ಪುಸ್ತಕಗಳ ಕಾರಣ, ವಿದ್ವತ್ ಕ್ಷೇತ್ರದಲ್ಲೂ ಅವರು ಪ್ರಕಾಂಡ ಪಂಡಿತರೆಂದೂ ವಯ್ಯಾಕರಣಿ, ಪ್ರಸಿದ್ಧಿಯಾಗಿದ್ದರು.

ನನ್ನ ಸಹೋದ್ಯೋಗಿಯ ಪರಿಚಯದ ಕಾರಣ ವಾಗೀಶ ಶಾಸ್ತ್ರಿಗಳು ನಮ್ಮನ್ನು ಭೇಟಿ ಮಾಡಲು ಒಪ್ಪಿದ್ದು ನಮ್ಮ ಪುಣ್ಯವೇ. ಏಕೆಂದರೆ ಅವರಿಗೆ ಸದಾಕಾಲವೂ ಯೋಗ ವಿದ್ಯಾಭ್ಯಾಸಕ್ಕಾಗಿ ವಿದೇಶೀ ವಿದ್ಯಾರ್ಥಿಗಳ ದಂಡೇ ಕಾದಿರುತ್ತಿತ್ತು. ನನ್ನ ತಂದೆಯವರಿಗೆ ಆಗ ಸುಮಾರು ೮೫ ವರ್ಷಗಳು. ಈ ವಯಸ್ಸಿನಲ್ಲಿ ಅವರಿಗಿದ್ದ ಉತ್ಸಾಹ ಹಾಗೂ ಪ್ರಭುಗೀತಾವನ್ನು ಹೊರತರುವ ತವಕಗಳನ್ನು ಅರ್ಥಮಾಡಿಕೊಂಡ ಶಾಸ್ತ್ರಿಗಳು ಈ ಗ್ರಂಥವನ್ನು ೨-೩ ದಿನಗಳಲ್ಲಿ ಕೂಲಂಕಷವಾಗಿ

ಪರಿಶೀಲಿಸಬಹುದೆಂಬುದು ಅವರ ಪ್ರಾಥಮಿಕ ಅಭಿಪ್ರಾಯ. ನಮಗೂ ಸಹ ಅದು ಸಾಧ್ಯವಾಗಬಹುದೆಂಬ ನಂಬಿಕೆ ಮೂಡಿತ್ತು. ಹೀಗೆ ಪ್ರಭುಗೀತಾದ ಪಠಣ ಹಾಗೂ ಶ್ರವಣ ವಾಗೀಶಶಾಸ್ತ್ರಿಗಳು ಹಾಗೂ ನನ್ನ ತಂದೆಯವರ ನಡುವೆ ಆರಂಭಗೊಂಡಿತ್ತು. ಶಾಸ್ತ್ರಿಗಳು ತಮಗೆ ಸಾಧ್ಯವಿದ್ದ ಎಲ್ಲಾ ಸಮಯವನ್ನು ನನ್ನ ತಂದೆಯವರಿಗೆ ಒದಗಿಸಿಕೊಟ್ಟರು. ಅಂದರೆ ದಿನಕ್ಕೆ ಏಳೆಂಟು ಗಂಟೆಗಳು. ಹಸ್ತಪ್ರತಿ ಓದಿಸಿಕೊಂಡು ಹೋದಂತೆ ಈ ಗ್ರಂಥದ ಬಗ್ಗೆ ಆಸಕ್ತಿ ಹೆಚ್ಚುತ್ತಲೇ ಹೋಗುತ್ತಿತ್ತು. ಈ ಗ್ರಂಥದ ಪಠಣ-ಶ್ರವಣಗಳು ಏಳೆಂಟು ದಿನಗಳು ಕಳೆದರೂ ಸಹ ಸಂಪಾದಿಸಿದ ಪ್ರತಿಯ ಅರ್ಧ ಭಾಗವೂ ತಲುಪಿರಲಿಲ್ಲ. ಪರಸ್ಥಳವಾದ ಕಾಶಿಯಲ್ಲಿ ನಾವೂ ತಾನೇ ಎಷ್ಟು ದಿನ ಇರಲು ಸಾಧ್ಯ. ಹೀಗಾಗಿ ಇನ್ನೊಮ್ಮೆ ಮಿಕ್ಕ ಭಾಗಗಳನ್ನು ಪರಿಶೀಲಿಸಬಹುದೆಂದು ನಮ್ಮ ನಮ್ಮಲ್ಲಿ ಒಡಂಬಡಿಕೆಯಾಯಿತು. ನನ್ನ ತಂದೆಯವರು ದೆಹಲಿಯ ತನಕ ಪ್ರವಾಸ ಮಾಡಿದ್ದು ಅವರ ಜೀವನದ ಅತಿ ದೂರದ ಯಾತ್ರೆ. ಆದರೆ ಪ್ರಭುಗೀತೆಗೋಸ್ಕರ ಅವರು ಎರಡನೇ ಬಾರಿಗೂ ದೆಹಲಿ ಯಾತ್ರೆ ಮಾಡಬೇಕಾದ ಪ್ರಸಂಗವಾಯಿತು. ಎರಡನೇ ಬಾರಿಗೆ ಬಂದಾಗ ನಾನು ದೆಹಲಿಯ ಅಂಚಿನ ಮಯೂರ್ ವಿಹಾರದಲ್ಲಿ ನನ್ನದೇ ಕೊಠಡಿ ಇತ್ತು. ಈ ಕಾರಣದಿಂದ ಅವರ ದೆಹಲಿ ಯಾತ್ರೆ ಕಷ್ಟಕರವೆಂದೆನಿಸಲಿಲ್ಲ.

ಈ ಯಾತ್ರೆಯ ಅವಧಿಯಲ್ಲಿ ವಾಗೀಶ ಶಾಸ್ತ್ರಿಗಳು ಮತ್ತೆ ೮-೧೦ ದಿನಗಳ ಕಾಲ ತಮಗೆ ಸಾಧ್ಯವಿದ್ದ ಎಲ್ಲಾ ಕಾಲಾವಕಾಶವನ್ನು ನಮಗೆ ದಯಪಾಲಿಸಿದರು. ಇದರಲ್ಲಿ ನನ್ನ ಪಾಲು ಕೇವಲ ತಂದೆಯವರ ಜೊತೆಗೆ ವಾರಣಾಸಿಯಲ್ಲಿ ಅವರು ಹೋದ ಬಂದೆಡೆಯಲ್ಲಿ ಇರುವುದಾಗಿತ್ತು. ದಿನಪೂರ್ತಿ ಪ್ರಭುಗೀತಾದ ಕೆಲಸದಲ್ಲಿ ಮಗ್ನರಾಗಿರುತ್ತಿದ್ದರು. ವಾಗೀಶ ಶಾಸ್ತ್ರಿಗಳು ಪ್ರಭುಗೀತಾ ಪರಿಷ್ಕರಣ ಮಾಡಿಕೊಟ್ಟಿದ್ದು ನಮಗಂತೂ ಕೋಟಿ ರೂಪಾಯಿಗಳನ್ನು ಗಳಿಸಿದಷ್ಟು ಸಂತೃಪ್ತಿಯಾಗಿತ್ತು. ಕಡೆಗೂ ನಮ್ಮ ತಂದೆಗಿದ್ದು ಅಳುಕು ಕಣ್ಮರೆಯಾಗಿತ್ತು.

ವಾಗೀಶ ಶಾಸ್ತ್ರಿಗಳು ಪರಿಚಯವಾದ ತರುವಾಯವೇ ನಮ್ಮ ತಂದೆಯವರಿಗೆ ಡಾ॥ ಎಸ್.ಕೆ. ರಾಮಚಂದ್ರರಾಯರ ನೇರ ಸಂಪರ್ಕ ದೊರೆತದ್ದು. ಅವರು ಅಲ್ಲಮಪ್ರಭುಗಳ ತತ್ತ್ವಗಳಲ್ಲಿ ಅಗಾಧ ನಂಬಿಕೆ ಹಾಗೂ ಅಭಿಮಾನ ಹೊಂದಿದ್ದ ಗುಣಗ್ರಾಹಿಗಳು. ತಂದೆಯವರು ಸಂಶೋಧನೆಯಲ್ಲಿ ನಡೆದ ದಾರಿ ಅವರ ಕುತೂಹಲವನ್ನು ಕೆರಳಿಸಿತ್ತು. ನಿಮಗೆ ತೊಂದರೆ ಕೊಡುತ್ತಿದ್ದೇನೆ ಎಂದು ತಂದೆಯವರು ಅವರಲ್ಲಿ ಹೇಳಿದಾಗ ಅವರು ನನಗೇನೂ ತೊಂದರೆಯಿಲ್ಲ. ನೀವು ನಿಮ್ಮ ಬರೆಹವನ್ನು ನನಗೆ ತೋರಿಸುತ್ತೀರಿ. ಅದರಿಂದ ನನಗೆ ಉಪಕಾರವಾಗುತ್ತದೆ ಎಂಬ ಔದಾರ್ಯ ತೋರಿಸಿದ ಮಹಾನುಭಾವರು.

ಇಷ್ಟು ದೀರ್ಘ ಹಿನ್ನೆಲೆಯ ತರುವಾಯ ಪುನಃ ಡಾ॥ ತೋಂಟದ ಸಿದ್ಧಲಿಂಗ ಸ್ವಾಮಿಗಳ ವಿಷಯಕ್ಕೆ ನೆನಪನ್ನು ಹೊರಳಿಸೋಣ.

ಸಂಜೆ ಐದು ಗಂಟೆಗಳ ವೇಳೆಗೆ ಸ್ವಾಮಿಗಳ ಚಾಣಕ್ಯಪುರಿಯ ಕರ್ನಾಟಕ ಭವನ-೧ಕ್ಕೆ ಆಗಮನ. ಅವರ ಸಭೆಯಲ್ಲಿ ಮುಖ್ಯವಾಗಿ ಕರ್ನಾಟಕ ಭವನದ ಉದ್ಯೋಗಿಗಳು ಹಾಗೂ ಇತರ ಆಸಕ್ತರು ೫೦ಕ್ಕೂ ಹೆಚ್ಚು ಮಂದಿ ಇದ್ದರು. ಸಭಿಕರಲ್ಲಿ ಶಾಸಕರಾದ ವೀರಣ್ಣ ಮತ್ತಿಕಟ್ಟಿ ಹಾಗೂ ವಿಶ್ವಶಾಂತಿಯ activist ಮಹದೇವ ಹೊರಟಿಯವರು ಮುಂತಾದ ಗಣ್ಯರಿದ್ದರು.

ಸನ್ಮಾನದ ಸಂದರ್ಭದಲ್ಲಿ ಕರ್ನಾಟಕ ರಾಜ್ಯದ ವಿಶೇಷ ಪ್ರತಿನಿಧಿ ಟಿ.ಬಿ. ಜಯಚಂದ್ರ ಅವರು ಸಂಸ್ಕೃತ ಹಾಗೂ ಕನ್ನಡ 'ಪ್ರಭುಗೀತಾ' ಪುಸ್ತಕಗಳು ಸರ್ಕಾರದ ಪರವಾಗಿ ಜಗದ್ಗುರುಗಳಿಗೆ



ಅರ್ಪಿಸಿದರು. ಈ ಹೊತ್ತಗೆಗಳು ಅವರ ಕೈಗೆ ದೊರಕುತ್ತಿದ್ದಂತೆ ಸಭೆಯಲ್ಲೇ ಎರಡೂ ಆವೃತ್ತಿಗಳನ್ನು ಅವಲೋಕಿಸಿದರು. ಪ್ರಾಸ್ತಾವಿಕ ಭಾಷಣಗಳ ತರುವಾಯ ನನಗೆ ನೆನಪಿದ್ದಂತೆ ಅವರಿಗೆ ದೊರಕಿದ ಸೌಹಾರ್ದ ಪ್ರಶಸ್ತಿ ಗೌಣವಾಗಿ ಹೋಗಿತ್ತು. ಪ್ರಭುಗೀತಾ ಬಗ್ಗೆಯೇ ಮಾತನಾಡಲು ಪ್ರಾರಂಭಿಸಿಬಿಟ್ಟರು. 'ಈ ಪುಸ್ತಕದ ಹಿಂದೆ ಹಠವಿದೆ, ಇದು ಮಹಾಕಾರ್ಯ' ಎಂದು ಮುಕ್ತ ಹೃದಯದಿಂದ ನನ್ನ ತಂದೆಯವರ ಪ್ರಯತ್ನವನ್ನು ಪ್ರಶಂಸಿಸಿಬಿಟ್ಟರು. ಇದೇ ಸಂದರ್ಭದಲ್ಲಿ ಮಹಾದೇವ ಹೊರಟ್ಟಿಯವರು ಈ ಪುಸ್ತಕವನ್ನು ಹೊರತಂದ ಪ್ರೊ॥ ಸಿ. ಮಹಾದೇವಪ್ಪನವರನ್ನು ಸಾವಿರಾರು ಮಂದಿ ಭಾಗವಹಿಸುವ ಗದಗಿನ ಮಠದ ಜಾತ್ರೆಯ ವೇಳೆಯಲ್ಲಿ ಸನ್ಮಾನಿಸಬೇಕೆಂದು ಸ್ವಾಮಿಗಳಿಗೆ ಸಲಹೆ ಮಾಡಿದರು. ಜಗದ್ಗುರುಗಳು ಕೂಡಾ ತಕ್ಷಣವೇ ಒಪ್ಪಿಕೊಂಡು ನನಗೆ ಅವರ ಕಛೇರಿಯೊಡನೆ ಸಂಪರ್ಕದಲ್ಲಿರಲು ಸೂಚನೆ ನೀಡಿದರು.

ದೆಹಲಿಯಲ್ಲಿ ಅವರು ಉಳಿದುಕೊಂಡಿದ್ದು ರಾಜ್ಯಸಭಾ ಸದಸ್ಯ ಹಾಗೂ ಮಾಜಿ ಮುಖ್ಯಮಂತ್ರಿ ಎಸ್.ಆರ್. ಬೊಮ್ಮಾಯಿಯವರ ಗೃಹದಲ್ಲಿ. ಮಾರನೆಯ ದಿನ ಬೊಮ್ಮಾಯಿಯವರ ಮನೆಗೆ ನಾನು ಸ್ವಾಮಿಗಳ ಕಾರ್ಯದರ್ಶಿಯವರನ್ನು ಭೇಟಿ ಮಾಡಲು ಹೋದಾಗ ಸ್ವಾಮಿಗಳು ತಮ್ಮ ಇತರ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಹೊರಗೆ ಹೊರಟುಬಿಟ್ಟಿದ್ದರು. ಸ್ವಾಮಿಗಳು ಶಿಷ್ಯರು ನನ್ನ ಬಗ್ಗೆ ತಿಳಿದುಕೊಂಡು ಹೇಗೆ 'ಪ್ರಭುಗೀತಾ' ಪುಸ್ತಕಗಳನ್ನು ತಮ್ಮ ಮಂಚದ ಮೇಲೆ ಇರಿಸಿಕೊಂಡು ಎಲ್ಲಾ ಸಮಯದಲ್ಲೂ ಅದನ್ನು ಓದುತ್ತಿದ್ದಾರೆ ಎಂದು ನನಗೆ ತಿಳಿಸಿದಾಗ ಈ ಪುಸ್ತಕಗಳನ್ನು ಸ್ವಾಮಿಗಳಿಗೆ ಅರ್ಪಿಸಿದ್ದು ಸಾರ್ಥಕವಾಯಿತು ಎಂದು ನನಗೆ ಭಾಸವಾಯಿತು.

ತೋಂಟದಾರ್ಯ ಮಠದ ಕಛೇರಿಯಿಂದ ನನ್ನ ತಂದೆಯವರನ್ನು ಸಂಪರ್ಕಿಸಿ ಗದಗಿನ ಜಾತ್ರೆಯ ವೇಳೆ ಸಾವಿರಾರು ಜನಸಮೂಹದ ಮುಂದೆ ಸನ್ಮಾನಿಸಿ ಪ್ರಭುದೇವರ ಬಗ್ಗೆ ಇದ್ದ ಆಸ್ಥೆಯನ್ನು ಜಗಜ್ಜಾಹೀರು ಮಾಡಿದರು. ನಾನಂತೂ ಈ ಸಭೆಯಲ್ಲಿ ಭಾಗವಹಿಸಿರಲಿಲ್ಲ. ಅಲ್ಲಿ ಉಪಸ್ಥಿತರಿದ್ದವರ ಪ್ರಕಾರ ಸಮಾರಂಭ ಅದ್ದೂರಿಯಿಂದ ನೆರವೇರಿತು ಎಂದು ತಿಳಿಯಿತು.

ಪ್ರಭುಗೀತಾದ ಲೋಕಾರ್ಪಣ ಆದದ್ದು ಅಂದಿನ ಉಪರಾಷ್ಟ್ರಪತಿ ಭೈರೋಸಿಂಗ್ ಶೆಕಾವತ್ ಅವರಿಂದ ಅವರ ನಿವಾಸದಲ್ಲಿ ಭಾರತ ಕೋಮು ಸೌಹಾರ್ದ ಪ್ರಶಸ್ತಿ ಪಡೆದ ಒಂದು ತಿಂಗಳ ತರುವಾಯ ಆಯಿತು. ಈ ಸಭೆಯಲ್ಲಿ ಅಂದಿನ ರಾಜ್ಯಸಭಾ ಸದಸ್ಯ ಹಾಗೂ ಮಾಜೀ ಉಚ್ಚನ್ಯಾಯಾಲಯದ ಮುಖ್ಯನ್ಯಾಯಾಧೀಶ ರಂಗನಾಥ ಮಿಶ್ರರವರು ಹಾಗೂ ಕಾಂಗ್ರೆಸ್ಸಿನ ನಾಯಕ ಮೋಹನಪ್ರಕಾಶ್ ಅವರು ಭಾಗವಹಿಸಿದ್ದರು. ಹೀಗಾಗಿ ಜಗದ್ಗುರುಗಳು ಹಸ್ತಕಮಲದಿಂದ ಪ್ರಭುಗೀತಾವನ್ನು ಬಿಡುಗಡೆಮಾಡಿದ ಸಂಗತಿಯನ್ನು ಅವರ ನೆನಪಿನ ಸಂಪುಟದ ಸಂದರ್ಭದಲ್ಲಿ ಹೃದಯಪೂರ್ವಕವಾಗಿ ಜ್ಞಾಪಿಸಿಕೊಳ್ಳುತ್ತಿದ್ದೇನೆ.

**ಧರೆ ಇಲ್ಲದೆ ಬೆಳೆಯಬಹುದೆ ಧಾನ್ಯವ**
**ಮಳೆ ಇಲ್ಲದೆ ನೋಡಬಹುದೆ ಬೆಳೆಗಳ**
**ಒಂದು ವಸ್ತುವಿಗಾದಡೂ ದ್ವಂದ್ವವೆ ಬೇಕು**
**ನಮ್ಮ ಕಪಿಲಸಿದ್ಧಮಲ್ಲನ ನೋಡುವಡೆ**
**ಲಿಂಗಪ್ರಜೆ ಜಂಗಮದಾಸೋಹವೆ ಬೇಕು.**

# ತಾರಾವಳಿ ಸಾಹಿತ್ಯದಲ್ಲಿ ಶರಣರು

**ಶ್ರೀ ಆದಪ್ಪ ಮಲ್ಲಪ್ಪ ಗೊರಚಿಕ್ಕನವರ**
*ಕೂಡಲಸಂಗಮ, ತಾಲೂಕು ಹುನಗುಂದ*
*ಬಾಗಲಕೋಟೆ ಜಿಲ್ಲೆ – ೫೮೭ ೧೧೫*
*೯೪೮೨೮ ೧೯೬೦೮*

ಕನ್ನಡ ನಾಡಿನ ಶ್ರೀಮಂತ ಸಾಹಿತ್ಯದ ಭಾಗವಾಗಿ ಅನೇಕ ಬಗೆಯ ಲಘು ಸಾಹಿತ್ಯವನ್ನು ಕಾಣುತ್ತೇವೆ. ಈ ಬಗೆಯಲ್ಲಿ ತಾರಾವಳಿ ಸಾಹಿತ್ಯ ವಿಶಿಷ್ಟವಾಗಿ ಕಂಡುಬರುತ್ತದೆ. ರಗಳೆ, ಷಟ್ಪದಿ, ಸಾಂಗತ್ಯ, ಶತಕ, ಅಷ್ಟಕ, ತ್ರಿಪದಿ, ಕಂದ ಮುಂತಾದ ಪ್ರಕಾರಗಳಂತೆ ತಾರಾವಳಿ ಸಾಹಿತ್ಯವು ಕೂಡಾ ಪ್ರಮುಖವಾದ ಸಾಹಿತ್ಯವಾಗಿರುವುದನ್ನು ಕಾಣುತ್ತೇವೆ. ತಾರಾವಳಿ ಎಂಬ ಪದ ನಕ್ಷತ್ರಗಳ ಸಾಲು ಎಂಬ ಅರ್ಥನೀಡುತ್ತದೆ. ೨೭ ನುಡಿಗಳ ಸಮೂಹದಿಂದ ಕೂಡಿದ ಈ ಸಾಹಿತ್ಯ ಪ್ರಕಾರ ಅನೇಕ ವೈಶಿಷ್ಟ್ಯತೆಗಳನ್ನು ಒಳಗೊಂಡಿದೆ.

೨೭ ಎಂಬ ಅಂಶ ಇಲ್ಲಿ ಪ್ರಧಾನವಾಗಿದ್ದು ಈ ಮಿತಿಯಲ್ಲಿ ವ್ಯಕ್ತಿ, ಪೂಜ್ಯ ವಸ್ತು, ಇತ್ಯಾದಿಗಳ ಬಗ್ಗೆ ವರ್ಣನೆ, ಸ್ತುತಿ ಮಾಡುವುದನ್ನು ನಾವು ಕಾಣುತ್ತೇವೆ. ಆರಂಭದಲ್ಲಿ ೨೭ ನುಡಿಗಳ ನಿಖರತೆ ಕಾಣುತ್ತೇವೆಯಾದರೂ, ಸಹ ಕಾಲಾಂತರದಲ್ಲಿ ಕವಿಯ ಇಚ್ಚೆಯ ಅನುಸಾರ ಈ ಮಿತಿಗಳಲ್ಲಿ ಬದಲಾವಣೆ, ಏರಿಳಿತ ಆಗಿರುವುದು ಕಂಡುಬರುತ್ತದೆ. ಕವಿತತ್ವದ ಬಹತೇಕ ಅಂಶಗಳು ಇವುಗಳಲ್ಲಿ ಕಂಡುಬರುತ್ತವೆ. ವರ್ಣನೆ, ಸ್ತುತಿಗಳು ಇವುಗಳಲ್ಲಿ ಅಧಿಕವಾಗಿ ಕಂಡುಬರುತ್ತವೆ.

ಈ ತಾರಾವಳಿಗಳು ಒಳಗೊಂಡ ವಿಷಯ ವಸ್ತುವಿನ ವಿಂಗಡನೆಯ ಆಧಾರವಾಗಿ ೧. ಸ್ತುತಿರೂಪದ ತಾರಾವಳಿಗಳು, ೨. ಜಾತ್ರೆ–ಪೂಜೆ–ಪಲ್ಲಕ್ಕಿ ವರ್ಣನಾಪರ ತಾರಾವಳಿಗಳು, ೩. ತತ್ವಪ್ರಧಾನ ತಾರಾವಳಿಗಳು ೪. ಐತಿಹಾಸಿಕ ತಾರಾವಳಿಗಳು ಎಂದು ನಾಲ್ಕು ಗುಂಪುಗಳಲ್ಲಿ ವಿಂಗಡನೆ ಮಾಡಿರುವುದನ್ನು ಕಾಣುತ್ತೇವೆ.

ನಾಡಿನ ಶ್ರೇಷ್ಠ ವಿದ್ವಾಂಸರಾದ ಡಾ. ವೀರಣ್ಣ ರಾಜೂರರವರು ಸಂಪಾದಿಸಿದ ವೀರಶೈವ ತಾರಾವಳಿ ಸಂಪುಟವು ಗದಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ವತಿಯಿಂದ ಪ್ರಕಟಣೆಗೊಂಡಿದ್ದು, ೧೯೯೪ರಲ್ಲಿ ಮೊದಲ ಮುದ್ರಣ ಕಂಡ ಈ ಕೃತಿಯ ಗ್ರಂಥದಾನವನ್ನು ಸ.ಸ. ಮಾಳವಾಡ ದಂಪತಿ ಸಾಹಿತ್ಯ ನಿಧಿಯವರು ಪೂರೈಸಿದ್ದಾರೆ. ಈ ಮಹತ್ವಪೂರ್ಣ ಕೃತಿಯಲ್ಲಿ ಸಂಗ್ರಹಗೊಂಡ ೬೩ ತಾರಾವಳಿಗಳ ಪೈಕಿ ಆಯ್ದ ತಾರಾವಳಿಗಳಲ್ಲಿ ಶರಣರ ಕುರಿತಾದ ಉಲ್ಲೇಖವಾದ ಅಂಶಗಳ ಬಗ್ಗೆ ಗಮನಹರಿಸುವ ಉದ್ದೇಶವನ್ನು ಈ ಲೇಖನ ಹೊಂದಿದೆ. ಈ ನೆಲೆಯಲ್ಲಿ ಈ ಬಗೆಯ ಮೌಲ್ವಿಕ ಕೃತಿಯನ್ನು ಸಾರ್ಥಕ ಪರಿಶ್ರಮವಹಿಸಿ ನಾಡಿನ ಸಾರಸ್ವತ ಲೋಕಕ್ಕೆ ಅರ್ಪಿಸಿದ ಗ್ರಂಥದ ಸಂಪಾದಕರಿಗೂ, ಪ್ರಕಟಣೆಯ ಹೊಣೆಹೊತ್ತ ಪ್ರಕಾಶಕರಿಗೂ ಗೌರವಪೂರ್ವಕ ನಮನಗಳನ್ನು ಸಲ್ಲಿಸುತ್ತಾ, ಅವರ ಈ ಮಹಾಕಾರ್ಯ



ಅಧ್ಯಯನ, ಸಂಶೋಧನೆ, ಸಂಗ್ರಹಕಾರ್ಯದ ನೆಲೆಯಲ್ಲಿ ನಿತ್ಯಸ್ಮರಣೀಯವಾಗಿದೆ ಎನ್ನಬಹುದು.

**ಶರಣರ ಕುರಿತು ತಾರಾವಳಿಗಳು :**

ಶರಣರ ಕುರಿತಾದ ತಾರಾವಳಿಗಳನ್ನು ಗಮನಿಸುವಾಗ ವಿಜಯನಗರ ಅರಸರ ಕಾಲದ ಪ್ರೌಢದೇವರಾಯನ ಕಾಲದಲ್ಲಿದ್ದ ನೂರೊಂದು ವಿರಕ್ತರಲ್ಲಿ ಗುರುತಿಸಿಕೊಂಡ ಕರಸ್ಥಲ ನಾಗಿದೇವನು ರಚಿಸಿದ ಮಡಿವಾಳ ಮಾಚಯ್ಯನ ತಾರಾವಳಿ ಆರಂಭಿಕ ತಾರಾವಳಿಯಾಗಿ ಗುರುತಿಸಿಕೊಂಡಿದೆ. ತಾರಾವಳಿಗಳಲ್ಲಿ ಅನೇಕರ ಸ್ತುತಿಯನ್ನು ಕಾಣುವಂತೆ ಅಂದರೆ ಶಿವ, ದೇವಿ, ಗಣ ಇವರ ಸ್ತುತಿಗಳಂತೆ ಶರಣರ, ಪುರಾತನ ಶರಣರ, ಬಸವಾದಿ ನೂತನ ಶರಣರ, ವಿರಕ್ತರ ಸ್ತುತಿಗಳು ಸಹ ಅಧಿಕವಾಗಿ ಇರುವುದನ್ನು ಕಾಣುತ್ತೇವೆ. ಶಿವಭಕ್ತರು ಹಾಗೂ ಶರಣರ ಹೆಸರುಗಳು ಸಮಾವೇಶಗೊಂಡ ತಾರಾವಳಿಗಳು ಸಹ ಇರಲಾಗಿವೆ. ಶರಣಸತಿ ಲಿಂಗಪತಿ ಭಾವ ಸೇರಿದಂತೆ ಅಷ್ಟಾವರಣ, ಷಟಸ್ಥಲ, ಪಂಚಾಚಾರಗಳ ಸಾರಗಳನ್ನು ಆಶಯಗಳನ್ನು ಪ್ರತಿನಿಧಿಸುವ, ಶರಣ ಸಂಸ್ಕೃತಿಯ ಸಂದೇಶಗಳನ್ನು ತಿಳಿಸುವ ತಾರಾವಳಿಗಳನ್ನು ಕಾಣುತ್ತೇವೆ.

ಅನೇಕ ಶರಣರ ಕುರಿತಾದ ಐತಿಹಾಸಿಕ ಮಹತ್ವದ ವಿಷಯಗಳನ್ನು ಕ್ರಮಾನುಗತವಾಗಿ ಕೊಡಮಾಡುವ ಮೂಲಕ ಅನೇಕ ಮೌಖಿಕ ಪರಂಪರೆಯ ಅಂಶಗಳನ್ನು ದಾಖಲಿಸುವ ಕಾರ್ಯ ಇವುಗಳ ರಚನೆಯ ಮೂಲಕ ನಡೆದಿರುವುದನ್ನು ಕಾಣುತ್ತೇವೆ. ಶರಣರು ಕೈಗೊಂಡ ಅನೇಕ ಕಾರ್ಯಗಳನ್ನು ಸಹ ಶ್ಲಾಘನೆಮಾಡುವ ಕಾರ್ಯ ಇಲ್ಲಿ ನಡೆದಿದೆ. ಬಸವಣ್ಣನವರು, ಪ್ರಭುದೇವ, ಚನ್ನಬಸವಣ್ಣನವರು, ಮಡಿವಾಳ ಮಾಚಯ್ಯ ಹೀಗೆ ಅನೇಕ ಶರಣರ ಕುರಿತಾದ ತಾರಾವಳಿಗಳನ್ನು ಗಮನಿಸುತ್ತೇವೆ. ಬಸವೇಶ್ವರರ ಜೀವನ ಸಾಧನೆಯ ವೃತ್ತಾಂತಗಳನ್ನು ಕಟ್ಟಿಕೊಡುವ ತಾರಾವಳಿಗಳ ಪೈಕಿ ಗರಣಿ ಬಸವಲಿಂಗನ ಬಸವೇಶ್ವರನ ಮಹಿಮಾ ತಾರವಳಿ ಗಮನಾರ್ಹ ಅಂಶಗಳನ್ನು ಒಳಗೊಂಡಿದೆ. ಮಡಿವಾಳ ಮಾಚಯ್ಯ ಹಾಗೂ ವೀರಭದ್ರನ ಅವತಾರದ ಬಗ್ಗೆ ಹೇಳುವ ತಾರಾವಳಿ ಅನೇಕ ಶೌರ್ಯಪರ ಅಂಶಗಳನ್ನು ಉಲ್ಲೇಖಿಸುವುದನ್ನು ಕಾಣುತ್ತೇವೆ. ಈ ನೆಲೆಯಲ್ಲಿ ಶರಣರ ಜೀವನದ ಆರಂಭದ ಹಂತದಿಂದ ಹಿಡಿದು ಜೀವನದ ಅನೇಕ ಹಂತದ ಕಾರ್ಯ, ಸಾಧನೆಗಳಿಗೆ ಪೌರಾಣಿಕ ಸನ್ನಿವೇಶಗಳನ್ನು ಸಮೀಕರಿಸಿ ಹೇಳುವುದನ್ನು ಕಾಣುತ್ತೇವೆ. ಈ ಬಗೆಯ ಅಂಶಗಳು ಬಹುತೇಕ ಈ ತಾರಾವಳಿ ಲಘುಸಾಹಿತ್ಯದ ಪ್ರಕಾರವು ಸಹ ಈ ಹಿಂದಿನ ಹರಿಹರ, ಭೀಮಕವಿ, ಸಿಂಗಿರಾಜ ಮೊದಲಾದವರ ಅನೇಕ ನಡೆಯನ್ನು ಅನುಸರಿಸಿರುವುದನ್ನು ಗುರುತಿಸಲು ಸಾಧ್ಯವಾಗುತ್ತದೆ.

ಮಾಚಯ್ಯ ಹಾಗೂ ಬಿಜ್ಜಳರ ನಡುವೆ ನಡೆದ ಘಟನೆಯೊಂದು ಶರಣರ ಹಿರಿಮೆಯನ್ನು ಪ್ರತಿನಿಧಿಸುತ್ತದೆ. ಪವಿತ್ರವಾದ ಮಡಿವಾಳ ವೃತ್ತಿಕಾಯಕದಲ್ಲಿ ತೊಡಗಿದ್ದ ಮಾಚಿದೇವನಿಗೆ ಬಿಜ್ಜಳ ತನ್ನ ಬಟ್ಟೆಯನ್ನು ತೊಳೆಯಲು ಒತ್ತಾಯಿಸುವ ಹಾಗೂ ಮಾಚಿದೇವ ಅದನ್ನು ತಿರಸ್ಕರಿಸುವ ಘಟನೆಗಳು ನಡೆಯಲಾಗಿ ಬಿಜ್ಜಳನು ಆನೆಯನ್ನು ಮಾಚಯ್ಯನ ಮೇಲೆ ಬಿಡಲಾಗಿ ಆನೆಯನ್ನು ಮಾಚಯ್ಯ ನೆಲಕ್ಕೆ ಕೆಡುವುವ ಸನ್ನಿವೇಶದ ಪ್ರಸ್ತಾಪವು ವರ್ಣನೆಯ ನೆಲೆಯಲ್ಲಿ ಕಂಡರೂ ಸಹ ಅರಸರು ಹಾಗೂ ಶರಣರು ಹೊಂದಿದ ತಾತ್ವಿಕ, ಸೈದ್ಧಾಂತಿಕ ವಿರೋಧದ ಅಂಶಗಳನ್ನು ಈ ಬಗೆಯ ಅಂಶಗಳ ಮೂಲಕ ಗ್ರಹಿಸಬಹುದಾಗಿದೆ. ಈ ಬಗೆಯಲ್ಲಿ ಅನೇಕ ತಾರಾವಳಿಗಳು ಇತಿಹಾಸ ರಚನೆ, ಅಧ್ಯಯನಕ್ಕೆ ಪೂರಕವಾಗಬಲ್ಲ ಆಕರವನ್ನು ಒದಗಿಸುವುದರಿಂದ ಶರಣರು ಸೇರಿದಂತೆ ಅನೇಕ ಆಳರಸರ ಕುರಿತಾಗಿ ಕೆಲವು

ನಂಬಲರ್ಹ ಸಂಗತಿಗಳನ್ನು ಇವು ಪ್ರತಿಪಾದಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಸ್ಥಳಗಳ ಬಗ್ಗೆ, ಘಟನೆಗಳ ಬಗ್ಗೆ ವ್ಯಕ್ತಿಗತ ಅಂಶಗಳ ಬಗ್ಗೆ ಅಧಿಕೃತ ನೆಲೆಯ ಅಂಶಗಳನ್ನು ಈ ತಾರಾವಳಿಗಳು ಒಳಗೊಂಡಿರುವುದನ್ನು ಕಾಣುತ್ತೇವೆ.

**ತಾರಾವಳಿಗಳ ಕರ್ತೃಗಳ ಕುರಿತು :**

ತಾರಾವಳಿ ಕರ್ತೃಗಳ ಪೈಕಿ ಕೆಲವರ ಬಗ್ಗೆ ಮಾಹಿತಿಗಳು ಲಭ್ಯವಾದರೆ, ಕೆಲವರ ಕುರಿತಾದ ಮಾಹಿತಿಗಳು ಅಲಭ್ಯ, ಅಪೂರ್ಣವಾಗಿರುವುದನ್ನು ಕಾಣುತ್ತೇವೆ. ಈ ನೆಲೆಯಲ್ಲಿ ಇನ್ನಷ್ಟು ಸಂಶೋಧನೆ ವಿಶ್ಲೇಷಣೆಗಳ ಅಗತ್ಯತೆಗಳನ್ನು ಈ ಹಂತದಲ್ಲಿ ಕಾಣುತ್ತೇವೆ. ತಾರಾವಳಿಗಳ ಕರ್ತೃಗಳು ಅಂಕಿತನಾಮವನ್ನು ಹೊಂದಿರುವುದನ್ನು ಕಾಣುತ್ತೇವೆ. ಕರ್ತೃಗಳಿಗೆ ಮೂಲ ಹೆಸರನ್ನು ಬಿಟ್ಟು ಇನ್ನು ಅನೇಕ ಹೆಸರುಗಳಿಂದ ಕರೆಯುತ್ತಿದ್ದರೆಂಬ ಸಂಗತಿಗಳು ತಿಳಿದುಬರುತ್ತವೆ. ಅನೇಕರು ಸಂಸಾರಿಗಳು ಹಾಗೂ ಮಠದ ಸ್ವಾಮಿಗಳು ಇರುವುದನ್ನು ಗಮನಿಸುವಾಗ ಈ ತಾರವಳಿಗಳನ್ನು ಇಂತಹವರೇ ರಚಿಸಬೇಕೆಂಬ ನಿಯಮ ಕಟ್ಟಳೆಗಳು ಇಲ್ಲದಿರುವುದನ್ನು ತಿಳಿಸುತ್ತದೆ. ಕರ್ನಾಟಕದ ನಾನಾ ಭಾಗಗಳ ವ್ಯಕ್ತಿಗಳು ತಾರಾವಳಿಗಳ ಕರ್ತೃಗಳಾಗಿರುವದರಿಂದ ಇಲ್ಲಿ ಪ್ರಾದೇಶಿಕ ಅಂಶಗಳ ಪ್ರಸ್ತಾಪ, ಭಾಷಾ ಸ್ವರೂಪದ ವಿಶೇಷತೆಗಳನ್ನು ಕಾಣುತ್ತೇವೆ. ತಾರಾವಳಿಗಳ ಕರ್ತೃಗಳು ಅನೇಕ ತಾರಾವಳಿಗಳನ್ನು ರಚಿಸಿದ್ದು, ಈ ಹಿಂದಿನ ಅನೇಕ ಆಕರಗಳನ್ನು ಸದ್ಬಳಕೆ ಮಾಡಿಕೊಂಡಿರುವುದನ್ನು, ಮೌಖಿಕ ಅಂಶಗಳನ್ನು ಆಧರಿಸಿ ರಚಿಸಿರುವುದನ್ನು ಕಾಣುತ್ತೇವೆ. ಅನೇಕರು ತಾರಾವಳಿಗಳ ಕೊನೆಯ ಹಂತದಲ್ಲಿ ತಮ್ಮ ಹೆಸರುಗಳನ್ನು ಪ್ರಸ್ತಾಪಮಾಡಿರುವುದನ್ನು ಕಾಣುತ್ತೇವೆ. ರಾಜಾಶ್ರಯ ಪಡೆದ, ಪಡೆಯದವರು ಸಹ ಇವುಗಳ ರಚನೆಯಲ್ಲಿ ತೊಡಗಿದ್ದರು ಎಂಬ ಅಂಶಗಳು ಕಂಡುಬರುತ್ತವೆ. ಅನೇಕರ ತಾರಾವಳಿಗಳು ಧಾರ್ಮಿಕ ಅಂಶಗಳಿಂದ ಪ್ರೇರಿತಗೊಂಡಿರುವುದನ್ನು ಕಾಣುವಾಗ ಮಠ ಪರಂಪರೆಯ ಪ್ರಭಾವ, ದೇವರು, ಧರ್ಮಗಳ ಬಗ್ಗೆ ಹೊಂದಿರುವ ಶ್ರದ್ಧೆ, ನಿಷ್ಠೆ ಇವರ ತಾರಾವಳಿಗಳಲ್ಲಿ ಅನಾವರಣಗೊಂಡಿದೆ. ತಿಮ್ಮಾಂಬೆ ಎಂಬ ಮಹಿಳೆಯು ಸಹ ತಾರಾವಳಿ ರಚಿಸಿರುವ ಅಂಶಗಳನ್ನು ಗಮನಿಸುವಾಗ ಈ ಬಗ್ಗೆ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಆಸಕ್ತಿಯನ್ನು ಹೊಂದಿಲ್ಲವೆಂದು ತೋರುತ್ತದೆ. ೧೮ನೇ ಶತಮಾನದಿಂದ ಮೊದಲ್ಗೊಂಡು ೨೦ನೇ ಶತಮಾನದ ಅನೇಕ ತಾರಾವಳಿ ಕರ್ತೃಗಳನ್ನು ಗುರುತಿಸುತ್ತೇವೆ.

ಶರಣಪ್ಪ, ಚನ್ನವೀರೇಶ, ಕಸ್ತೂರಿ ಸಿದ್ಧ, ಮಹಾಲಿಂಗರಾರ್ಯ ದ್ಯಾಂಪುರ, ಮುರಿಗೆ ಶಾಂತವೀರ, ಚೆನ್ನಕವಿ, ಸೋಮೆಕಟ್ಟೆ ಚೆನ್ನವೀರೇಶ, ಸಿದ್ಧಲಿಂಗ, ಬಸವಲಿಂಗ, ಕವಿ ಪವಾಡ, ಸುವ್ವಿಮಲ್ಲ, ಉದ್ದಂಡನ ಬಾಲಕ, ಸಿದ್ಧನಂಜೇಶ, ಕವಿಲಿಂಗ, ಚೆನ್ನಪ್ಪಕವಿ, ಸುವ್ವಿ ಬಸವ, ನೀಲಕಂಠರಾಧ್ಯ, ಮರಿರಾಚವಟ್ಟೀಶ, ಗರಣಿಯ ಬಸವಲಿಂಗ, ಕರಸ್ಥಲದ ನಾಗಿದೇವ, ತಿಮ್ಮಾಂಬೆ, ಮರಿಸಿದ್ಧಲಿಂಗ ದೇಶಿಕ, ಇಮ್ಮಡಿ ಮುರಿಗಾ ಗುರುಶಿದ್ಧ, ಸೋಸಲೆ ರೇವಣಾರಾಧ್ಯ, ಪಿ.ಎಂ. ಗಿರಿರಾಜು, ಹಲುಗಟ್ಟಿ ವೀರ, ಮೆಡ್ಲೇರಿ ಶಿವಲಿಂಗ, ಅಳಿಯ ಲಿಂಗರಾಜ, ಜ್ವಲಕಂಠ ಸ್ವಾಮಿ, ಕವಿವೀರ, ಕುರ್ಕೆಯ ರೇವಣ, ಸಿದ್ಧಮಲ್ಲ, ಪ್ರಸನ್ನದೇಶಿಕ ಮುಂತಾದವರು ತಾರಾವಳಿಗಳನ್ನು ರಚಿಸಿದ ಕರ್ತೃಗಳಾಗಿದ್ದಾರೆ.

**ತಾರಾವಳಿಗಳ ಬಗ್ಗೆ ವಿದ್ವಾಂಸರ ಹೇಳಿಕೆಗಳು:**

ವಿದ್ವಾನ್ ಎಂ.ಎಸ್. ಬಸವರಾಜಯ್ಯ : "ತಾರಾವಳಿ ಸಾಹಿತ್ಯವು ದೃಶ್ಯ -ಶ್ರವ್ಯ ಕಾವ್ಯಗಳ



ಮಧ್ಯವರ್ತಿ ಎನಿಸಿದ್ದು, ಒಂದು ಬಗೆಯ ಗೇಯ ಸಾಹಿತ್ಯವೆನಿಸಿ ಹಾಡುವಾಗ, ಆಲಿಸುವಾಗ ಕಂಡಂತೆ, ಕೇಳ್ದಂತೆ ತಟ್ಟನೆ ಚಿತ್ತದಲ್ಲಿ ಕಥಾವಸ್ತು ಮೂಡಿಬಂದು, ನೆನೆಯುತ್ತಿದ್ದಂತೆಯೇ ಹೆಚ್ಚೆಂದರೆ ಕೇವಲ ಅರ್ಧಗಂಟೆಯಲ್ಲಿಯೇ ತೆರೆ ಸರಿದಂತಾಗಿ ಮತ್ತೂ ಮೆಲುಕು ಹಾಕಬೇಕೆಂಬ ಪ್ರೀತಿಗೆ ಕಾರಣವಾಗಿ ಮುಕ್ತಾಯವಾಗುತ್ತದೆ. ಓದಲು ಆಲಿಸಲು ಬೇಸರವಾಗದಂತೆ ಕಾವ್ಯಾಂಶವೂ ಮತ್ತು ಗೇಯತೆಯೂ ಈ ಸಾಹಿತ್ಯದಲ್ಲಿ ಅಳವಟ್ಟು ಮಳೆಗಾಲದ ಹೊಳೆ ಹರಿದಂತೆ ಭಾಸವಾಗುತ್ತದೆ. ಹೊಳೆ ಇಳಿದುದೂ ಕಾಣದಷ್ಟು ಭಾವಾವೇಷವನ್ನು ತಂದುಕೊಡುತ್ತದೆ.

ಪ್ರೊ. ಸೀತಾರಾಮ ಜಾಗೀರದಾರ : "ತಾರಾವಳಿ ರಚನೆಯ ಬೆನ್ನಹಿಂದೆ ಸಂಗೀತ ಶಾಸ್ತ್ರದ ಕೈವಾಡವಿದೆಯೆಂಬುದು ಕಾಣುತ್ತದೆ. ಇಲ್ಲಿ ನಿಯತ ಮಾತ್ರಗಣಗಳು ಕಡ್ಡಾಯವಾಗಿ ಬಂದಿಲ್ಲ. ಅರ್ಥಾತ್ ಇವು ನಿಯತ, ನಿಯಮ ಭರಿತ ಛಂದೋಬಂಧಗಳಲ್ಲ. ಆದರೆ ತಾಳಲಯಗಳನ್ನು ಕಡ್ಡಾಯವಾಗಿ ಹಾಡುವ ವ್ಯಕ್ತಿ ಹಾಡಿನಲ್ಲಿ ಇಟ್ಟುಕೊಂಡು ಬರುವುದು ಅನಿವಾರ್ಯ. ಅದನ್ನು ಅವರು ಪಾಲಿಸಿಕೊಂಡು ಬಂದಿದ್ದಾರೆ."

ಡಾ. ರಂ.ಶ್ರೀ. ಮುಗಳಿ : ಮರಿರಾಚವಟ್ಟೀಶನ ಪ್ರಭುನಟನ ತಾರಾವಳಿಯನ್ನು ಕುರಿತು ಬರೆಯತ್ತಾ "ಈ ತಾರಾವಳಿಯಲ್ಲಿ ಹಾಡಿನ ರೂಪವಾಗಿ ೨೭ ನುಡಿಗಳಿದ್ದು, ಕೊನೆಯಲ್ಲಿ ಮಾತ್ರ ಕಂದಗಳಿವೆ. ಲಲಿತರಗಳೆಯ ಲಯದಲ್ಲಿ ಆದಿಪ್ರಾಸದೊಡನೆ ಈ ನುಡಿಗಳನ್ನು ರಚಿಸಲಾಗಿದೆ. ಆದರೆ ಹಾಡಿನಲ್ಲಿ ಬೇಕಾದ ಪಲ್ಲವಿ ಇದ್ದಂತೆ ಕಾಣಲಿಲ್ಲ ಎಂದು ಹೇಳಿದ್ದಾರೆ."

**ಶರಣರ ಉಲ್ಲೇಖಗಳಿರುವ ತಾರಾವಳಿಗಳು :**

ಗಣತಾರಾವಳಿಯಲ್ಲಿ ಅನೇಕ ಶಿವಶರಣರ ಹೆಸರುಗಳು ಕಂಡುಬರುತ್ತವೆ. ಇದಕ್ಕೆ ಗಣಂಗಳ ತಾರಾವಳಿಯೆಂದು ಸಹ ಕರೆಯುತ್ತಾರೆ. ಈ ತಾರಾವಳಿಯ ಆಯ್ದ ಭಾಗಗಳನ್ನು ಗಮನಿಸುವಾಗ ಶಿವಶರಣರ ಹೆಸರುಗಳು ವಿಶಿಷ್ಟವಾಗಿ ಉಲ್ಲೇಖಗೊಂಡಿರುವುದನ್ನು ಕಾಣುತ್ತೇವೆ. ಶರಣರ ಹೆಸರುಗಳು ಕಾಯಕದೊಟ್ಟಿಗೆ ಪ್ರಸ್ತಾಪವಾಗಿರುವುದನ್ನು ಇಲ್ಲಿ ಕಾಣುತ್ತೇವೆ. ಈ ಬಗೆಯ ಶರಣರ ಹೆಸರುಗಳ ಪ್ರಸ್ತಾಪ ಇರುವ ತಾರಾವಳಿಯು ಅನೇಕ ಶರಣರ ಹೆಸರುಗಳು ಒಂದೆಡೆ ಸಂಗ್ರಹರೂಪದಲ್ಲಿ ದೊರೆಯುವಂತೆ ಮಾಡಿದೆ.

**ಗಣತಾರಾವಳಿ**

**ಬಸವಾದಿ ಪ್ರಮಥರ ಬಸುರಲ್ಲಿ ನಾ ಬಂದು**
**ಹೆಸರ ಹೇಳದೆ ಸುಮ್ಮನಿರಲಾರೆನಯ್ಯಾ ॥ಪಲ್ಲ॥**

**೧(ಮೊದಲ ನುಡಿ)**

**ಕಕ್ಕಯ್ಯ ಕಲಕೇತ ಬ್ರಹ್ಮಯ್ಯ ನಿಜಲಿಂಗ-**
**ಚಿಕ್ಕಯ್ಯ ಚಿಟ್ಟದೇವಯ್ಯ ಚೀಲಾಳಯ್ಯ**
**ಚಿಕ್ಕಮಾದಣ್ಣ ಚಿಮ್ಮುಲಿಗೆಯ ಚಂದಯ್ಯ**
**ಢಕ್ಕೆಯ ಮಾರಯ್ಯ ದಾರಯ್ಯ ಭೋಗಯ್ಯ**
**ಜಕ್ಕೇರ ಬ್ರಹ್ಮಯ್ಯ ಜಟದಾರ ರಾಮಯ್ಯ**
**ರಕ್ಕಸ ಬ್ರಹ್ಮಯ್ಯ ನುಲಿಯ ಚಂದಯ್ಯನು**
**ಚಿಕ್ಕದಣ್ಣಾಯಕ ಚಿಪ್ಪನೂರ್ತಿಪ್ಪಯ್ಯ**
**ಅಕ್ಕನಾಗಮ್ಮ ಆದವ್ವೆ ಮಹದೇವಿ-**

ಯಕ್ಕಗೆ ಶರಣೆಂಬೆನು। ನೀಲಮ್ಮನ
ಒಕ್ಕುಮಿಕ್ಕುದನೆಂಬೆನು। ಅಲ್ಲಮನೆನ್ನ
ದಿಕ್ಕೆಂದು ಬಲಗೊಂಬೆನು। ಪ್ರಮಥರಿಂದ
ಚಿಕ್ಕಂದು ಮೊದಲಾಗಿ ನಾಂ ಬದುಕಿದೆನು॥

೫( ಕೊನೆಯ ನುಡಿ)

ಕಾರಿಕಾಲಮ್ಮೆ ಗೊಲ್ಲಾಳನು ಮಾನಕಂ–
ಜಾರನು ಜಂಬೂರ ಮಹಾಕಾಳ ದೇವಯ್ಯ
ಹೇರೂರ ಹೆಣ್ಣು ಬೊಂತಲದೇವಿ ಶಿವದೇವಿ
ಮಾರಯ್ಯ ಮೆರೆಮಿಂಡದೇವಯ್ಯ ಗುರುಭಕ್ತ
ಚಾರಗುಪ್ತಣ್ಣನು ಬಳ್ಳೇಶ್ವರ ಮಲ್ಲಯ್ಯ
ಹೆರೂರ ನಾಗಣ್ಣ ಮೊದಲಾದ ಪ್ರಮಥರು
ಧಾರುಣಿಯೊಳಗೆ ಬಂದು। ಭಕ್ತಿಜ್ಞಾನ
ವೈರಾಗ್ಯದಲ್ಲಿ ನಿಂದು। ಕೈವಲ್ಯವ
ಸೂರೆಗೊಂಡವ[ರ] ತಂದು। ತೋರಿದ ಚೆನ್ನ–
ವೀರೇಶಗಣೆಯಾದವರ ಕಾಣೆನೆಂದೂ॥
ಗಣತಾರಾವಳಿ ಸಂಪೂರ್ಣ ಮಂಗಳಮಹಾ.

**ಪ್ರಭುನಟನಾ ತಾರವಳಿಯ ಆಯ್ದ ಭಾಗ :**

ಪ್ರಭುದೇವರ ಜೀವನದ ಅನೇಕ ಅಂಶಗಳನ್ನು ಈ ತಾರಾವಳಿಯು ಸುದೀರ್ಘವಾಗಿ ವಿವರಿಸಿರುವುದನ್ನು ಕಾಣುತ್ತೇವೆ. ಪ್ರಭುದೇವರನ್ನು ಆರಂಭದ ಪಲ್ಲವಿಯಲ್ಲಿ ಪ್ರಭುರಾಯ ಎಂದು ಕರೆದಿರುವುದನ್ನು ಕಾಣುತ್ತೇವೆ. ಮಾಯಾ ಕೋಲಾಹಲನೆಂದು ಬಿರುದು ಪಡೆದ ಬಗ್ಗೆ, ಅಲ್ಲಮಪ್ರಭುವಿನ ಜೀವನದ ಅನೇಕ ಘಟನೆಗಳ ಬಗ್ಗೆ, ಬನವಾಸಿಯ ಮಧುಲಿಂಗದ ಬಗ್ಗೆ, ಅಲ್ಲಮಪ್ರಭುವನ್ನು ಅಲ್ಲಯ್ಯನೆಂದು ಕರೆದಿರುವುದನ್ನು, ಮಾಯಾದೇವಿಯ ಹಾಗೂ ಅಲ್ಲಮರ ಭೇಟಿಯ ಸಂದರ್ಭದ ವಿವರಣೆಯನ್ನು ಈ ತಾರಾವಳಿಯಲ್ಲಿ ಕಾಣುತ್ತೇವೆ. ಅಲ್ಲಮ ಸಿದ್ಧರಾಮರ ಮಾತುಕತೆಯ ಬಗ್ಗೆ, ಬಸವಣ್ಣನವರು ಇರುವ ಕಲ್ಯಾಣಕ್ಕೆ ಬಂದ ಅಂಶಗಳನ್ನು, ಅನೇಕ ಬಸವಾದಿ ಶರಣಗಣವನ್ನು ಸಂದರ್ಶನ ಮಾಡಿದ ಬಗ್ಗೆ, ಅಕ್ಕಮಹಾದೇವಿಯ ಪ್ರಸ್ತಾಪ ಇರುವ ಅಂಶಗಳ ಬಗ್ಗೆ, ನೀಲಮ್ಮ ಗಂಗಾಂಬಿಕೆ ಅಲ್ಲಮ ಪ್ರಭುವಿಗೆ ಆರತಿ ಬೆಳಗಿ ನಮೋ ನಮೋ ಎಂದು ಹೇಳಿದ ಬಗ್ಗೆ, ಗೋರಕ್ಷನ ನಡುವಿನ ಸಂವಾದದ ಬಗ್ಗೆ ಸೇರಿದಂತೆ ಅನೇಕ ಸಂಗತಿ ಉಪಸಂಗತಿಗಳ ವಿಶ್ಲೇಷಣಾತ್ಮಕ ಅಂಶಗಳು, ಅಲ್ಲಮನ ಕುರಿತಾದ ವರ್ಣನೆಯ ಸಾಲುಗಳನ್ನು ಇಲ್ಲಿ ತಾರಾವಳಿಯ ಉಕ್ತಿಯಾಗಿ ಕಂಗೊಳಿಸಿರುವುದನ್ನು ಕಾಣುತ್ತೇವೆ. ಈ ತಾರಾವಳಿಯ ಆಯ್ದ ಸಾಲುಗಳನ್ನು ಇಲ್ಲಿ ಗಮನಿಸುವುದಾದರೆ...

ಎಂದೆನುತಾಗ ಪ್ರಭುವೆ ನೀನು ಹರುಷದಿ
ಮುಂದೆ ಕಲ್ಯಾನದ ಬಸವಾದಿಗಣರೆಲ್ಲ
ಇಂದು ನಾ ಬರಲರಿದಪರೊ ಇಲ್ಲವೊ ಎಂದು
ಕಂದರ್ಪಜಿತ ನೀನು ವಿಗಡರೂಪಾಗುತೆ



ಬಂದು ಬೀದಿಯೊಳು ಕುಣಿದು ನಗುವರ ಕಂಡು
ಚಂದದಿಂದವರವರಂತಾಡುತಿರಲಾಗ
ಕುಂದಿಲ್ಲದಿಹ ಬಸವಾದಿ ಪ್ರಮಥಗಣ
ಸಂದೋಹವೆಯ್ತಂದು ಶರಣು ಶಾಶ್ವತ ಪ್ರಭು
ತಂದೆ ಬಿಜಯ ಮಾಡೆನುತ ಬಂದು ನಮಿಸಲು
ಸಂದೇಹವಿಲ್ಲದೆ ಶೂನ್ಯಸಿಂಹಾಸನ
ದಂದವ ನೋಡಿ ಪ್ರಭುವೆ ಚೆನ್ನಬಸವನೊ
ಳೆಂದಿರಿಂತಪ್ಪ ಚ್ಯೋದ್ಯವ ಕಂಡುದಿಲ್ಲ ನಾ
ಬಂದು ನಮಿಸುತೆ ಗುರುವೆ ಚರಲಿಂಗದ
ತುಂರುದ ಹಸಿದು ಕಂಡಕಡೆಗೆ ಪೋದರು ಸ್ವಾಮಿ
ಕುಂದು ಬಂದಿತು ಸಂಗಮೇಶನೊಪ್ಪನು ಎನೆ
ಸಮದೇಹವೆಕೆ ಬರ್ಪಂತೆ ಮಾಡುವೆನೆನ
ಲೆಂದು ಗುರುವೆ ಷಡುರುಚಿಗಳಾರ್ತಿಹರಿದ ಬಳಿ
ಕಿಂದುಧರನ ಚರಮೂರ್ತಿಗೆ ಸೊಗಸದು
ತಂದೆ ಇಂತಾಯ್ತು ನೋಡಾ। ಎನಲೆಲ್ಲವ
ತಂದು ನೀನೆನಗೆ ನೀಡಾ। ನಾವ್ ಹಸಿದೆವು
ಹಿಂದವರ್ಗೆಡೆಯ ಮಾಡಾ। ಎನೆ ಬದುರ್ಕಿದೆ
ನೆಂದಾಗ ಬಿಡದೋಡಾಡು। ತೊಡನೆ ಗಣ
ವೃಂದವೀ ಗುರುವು ಬೇಡ। ಲ್ಲಿಕ್ಕುವರುಂಟೆ
ಎಂದು ಭಾವಿಸಲು ತಿಳಿದೆ ಎಲೆ ಜ್ಞಾನಚೂಡಾ॥

**ಬಸವೇಶ್ವರನ ಮಹಿಮಾ ತಾರಾವಳಿ :**

ಬಸವಣ್ಣನವರ ಕುರಿತಾದ ಈ ತಾರಾವಳಿಯು ಗರಣಿಯ ಬಸವಲಿಂಗದೇವನಿಂದ ರಚನೆಗೊಂಡಿದೆ. ಅನೇಕ ಬಗೆಯ ಧಾರ್ಮಿಕ ಆಯಾಮ ಅಂಶಗಳ ಉಲ್ಲೇಖ, ಬಸವಣ್ಣನವರ ಕೇಂದ್ರಿಕೃತ ನೆಲೆಯಲ್ಲಿ ಚರ್ಚೆಗೊಂಡಿದೆ. ಬಸವಣ್ಣನ ಜೀವನದಲ್ಲಿ ಸಂಭವಿಸಿದ ಅನೇಕ ಘಟನಾವಳಿಗಳ ಪ್ರಸ್ತಾಪವನ್ನು ಇಲ್ಲಿ ಕಾಣುತ್ತೇವೆ. ಕಕ್ಕಯ್ಯನ ಪ್ರಸಾದದ ಅಂಶಗಳು, ಬಿಜ್ಜಳನ ಆಸ್ಥಾನದಲ್ಲಿ ವಿಸ್ಮಯ ಲಿಪಿ ಓದಿದ ಬಗ್ಗೆ, ಗುರು ಲಿಂಗ ಜಂಗಮ ದಾಸೋಹ ತತ್ವಗಳನ್ನು ಅನುಸರಿಸಿ ನಡೆದ ಬಗ್ಗೆ, ಜೈನ ಹಾಗೂ ಲಿಂಗಾಯತರ ಕುರಿತಾದ ಸಂಗತಿಗಳು, ಬಿಜ್ಜಳನ ಭಂಢಾರದ ಉಲ್ಲೇಖಗಳು, ಚನ್ನಬಸವಣ್ಣ ಹಾಗೂ ಬಸವಣ್ಣನವರ ಒಡನಾಟದ ಅಂಶಗಳು, ಕಲ್ಯಾಣದ ಶರಣರ ಜೊತೆ ನಡೆಸಿದ ಚರ್ಚೆಗಳು, ಪವಾಡಮಯ ಎನಿಸುವ ವಾಸ್ತವದಲ್ಲಿ ಸಮಾನತೆಯನ್ನು ಸಾರುವ ಅಂಶಗಳು, ಸೇರಿದಂತೆ ಬಸವಣ್ಣನವರನ್ನು ಅನೇಕ ಆಯಾಮದಲ್ಲಿ ವರ್ಣನಾತ್ಮಕವಾಗಿ ಹೊಗಳಿರುವುದನ್ನು ಈ ತಾರಾವಳಿಯ ವಿವಿಧ ಭಾಗಗಗಳಲ್ಲಿ ಕಾಣುತ್ತೇವೆ. ಬಸವಣ್ಣನವರ ಜೀವನದ ಆರಂಭಿಕ ಸಂಗತಿಗಳ ಪೈಕಿ ಕೂಡಲಸಂಗಮದಲ್ಲಿ ಕಳೆದ ಅನೇಕ ಅಂಶಗಳನ್ನು ತಿಳಿಸುವ ತಾರಾವಳಿಯ ಸಾಲುಗಳನ್ನು ಗಮನಿಸುವಾಗ, ಕಲ್ಯಾಣದಲ್ಲಿ ಹೊಂದಿದ ಸ್ಥಾನವನ್ನು ವರ್ಣಿಸುವಾಗ ಅನೇಕ ಅಂಶಗಳು ತಿಳಿದುಬರುತ್ತವೆ.

ಬಸವೇಶ್ವರನ ಮಹಿಮಾ ತಾರಾವಳಿಯ ಆಯ್ದ ಭಾಗ.

ಸ್ತುತಿಸಲೆನ್ನಳವೆ ನಿಮ್ಮತಿಶಯ ಮಹಿಮೆಯ
ಸಿತಿಕಂಠನವತಾರ ಬಸವದಂಡೇಶ್ವರ ॥ ಪಲ್ಲ॥
( ಮೂರನೆಯ ನುಡಿ)
ಸಂಗಮನಾಥನ ಸದನದೆಡೆಗೆ ಪೋಗಿ
ಪೊಂಗಿ ನಲಿದು ಭವನವದೊಳಪೊಕ್ಕ ಮ-
ಲಾಂಗ ನೀನೀಶನನೀಕ್ಷಿಸೆ ಪುಳಕ ಚ-
ಯಂಗಳಂಗದೊಳುಣ್ಮೆ ಭಜಿಸಿ ದ್ವಿಜರು ನಿ-
ನ್ನಿಂಗಿತವೆಂತೆನ್ನ [ದಂ] ರಾಯವನುರಿ
ಸಂಗಿಸಿ ಶಿವನ ನುಡಿಸಿ ತೆಗಸರ್ಚಿಸ-
ಲಂಗಜಹರನೆಲೆ ಮಗನೆ [ನಿ] ಎನಗೆ ಕೃಪೆ
ಜಂಗಮಮುಖದಿಂದಲಲ್ಲದಾಗದು ಪೋಗು
ಮಂಗಳವಾಕೆನಲು ಕೇಳಿ ನಲವೇರಿ
ಲಿಂಗದಪ್ಪಣ್ಣೆವಿಡಿದಲ್ಲಿಂದೆ ನಡೆತಂದು
ಶೃಂಗಾರವಾದ ಕಲ್ಯಾಣಪಟ್ಟಣದಲ್ಲಿ
ಕಂಗೊಳಿಸುವ ಕರಣಿಕಸಾಲೆಯೊಳಪೊಕ್ಕು
ವಿಂಗಡದಾಯ- ಬೀಯವ ನೆರೆ ತಿಳಿದು ಲೆ-
ಕ್ಕಂ ಗೂಡಿಯಾದಾಯವಿನಿತಾಯಿತೆಂದು ನಿ-
ರಂಗ ನೀನಿರದುಸುರೆ । ಕರಣಿಕ ಜ-
ನಂಗಗಳು ಪೋಗಳುತಿರೆ। ಸಭೆ ಮೆಚ್ಚಿ ಕ-
ರಂಗಳ ಮುಗಿವುತಿರೆ\ ಮಂತ್ರಿಬಲದೇವ-
ಗಿಂಗಿಂತವರಿಯ ಬರೆ। ಚಿತ್ತದೊಳು[ಪ್ರೀತಿ-]
ಯುಂ ಗುಡಿಗಟ್ಟು ತಿರೆ। ನಲವಿಂದ ತ-
ನ್ನಂಗಜೆಯಂ ಕೊಡೆ ಮದುವೆಯಾಗದಾಸೆದಾನೆ॥

(ನಾಲ್ಕನೇಯ ನುಡಿ)
ಎಳೆದೇರನಟ್ಟಿದ ವಿಸ್ಮಯಲಿಪಿಯು ಬಿ-
ಜ್ಜಳನ ಮುಂಗಡೆಯಲ್ಲಿ ಬೀಳಲ್ಕೆ ಕಾಣುತ-
ಗ್ಗಳ ಕರಣಿಕರಿಂದ ನೋಡಿಸಲೆಮುಗಿದು
ತಿಳಿಯದೆಂದಿರಿಸಲವನಿಪತಿ ನಿನ್ನನ-
ಮಳ ಸುವಿವೇಕಿ ಎಂದಲ್ಲಸುರೆ ಕೇಳಿ
ತಳಹುದೆ ಕರಸಲೈ ತಂದು ಲಿಪಿಯನೋ[ದಿ]
ತೊಳಗುವ ಪಿರಿಯ ಹಜಾರದೊಳಿರ್ದ ಬ-
ಹಳ ದ್ರವ್ಯಮಂ ಭೂಪತಿಗೆತೆಗಸಿತ್ತನೆ
ಭಳಿರೆ ಬದುಕಿರ್ದೆ ನಿನ್ನದು ಎನ್ನ ಬಾಗ್ಯವೆ
ನ್ನಳವಲ್ಲ ನಿನ್ನ ನುಡಿಸಲೆಲೆ ಬಸವೇಸ



ದಳಕೆ ಧರೆಗೆ ಧನದಾನಕ್ಕೆ ಪತಿ ನೀನೆ
ಒಳಗಾಗಿ ನಡವೆ ನಾನೆಂದು ಸಕಲಮಂತ್ರಿ-
ಗಳ ಮುಂದೆ ಪಟ್ಟವ ಕಟ್ಟಿ ನಮಿಸೆ ವಾದಿ-
ಗಳ ಹೃದಯಾವನಿಯಲ್ಲಿ ಚಿಂತೆಯ ಬೀಜ
ಮೊಳೆದೋರುತಿರೆ ಶಿವನ। ಮಹತ್ವವೇ-
ಗ್ಗಳವಾಗುತಿರೆ ಮದನ। ಹರನ ಭಕ್ತಿ
ಬೆಳೆಯಾಗುತಿರೆ ಭವನ।ಕಲ್ಯಾಣಕ್ಕೆ
ಕಳಸದಂತೆಸೆಯಲಧಿಕನಾಗಿ ಮೆರದನಾ॥

ಮಡಿವಾಳ ಮಾಚಯ್ಯನ ತಾರಾವಳಿ :

ಶರಣಸಂಕುಲದ ಶ್ರೇಷ್ಠ ಶರಣ ಮಡಿವಾಳ ಮಾಚಯ್ಯನ ಬಗ್ಗೆ ಈ ತಾರವಾಳಿಯಲ್ಲಿ ವಿವರಣೆ ಇಡಲಾಗಿದೆ. ಇಲ್ಲಿ ಮಾಚಯ್ಯನ ಜನನ, ಆತನ ಕಾರ್ಯಚಟುವಟಿಕೆಗಳನ್ನು ಅನೇಕ ಶೌರ್ಯದ ಸಂಗತಿಗಳಿಗೆ ಸಂವಾದಿಯಾಗಿ ಬಳಸಿದ್ದಾರೆ. ಇತನ ವೇಷ-ಭೂಷಣಗಳ ಅಲಂಕಾರಗಳ ಬಗ್ಗೆ ವರ್ಣನೆ ಇಲ್ಲಿ ಕಾಣುತ್ತೇವೆ. ವೀರಭದ್ರನ ಅವತಾರವೆನ್ನುವ ಬಗೆಯಲ್ಲಿ ಅನೇಕ ಹೋಲಿಕೆಗಳನ್ನು ಇಲ್ಲಿ ಕಾಣುತ್ತೇವೆ. ಶಿವ ಹಾಗೂ ಆತನ ಪರಿವಾರ ದೇವತೆಗಳ ಉಲ್ಲೇಖವನ್ನು ಇಲ್ಲಿ ಕಾಣುತ್ತೇವೆ. ಆರ್ಭಟ, ಶೌರ್ಯ, ಉಗ್ರಸ್ವರೂಪದ ವ್ಯಕ್ತಿತ್ವದ ಅನಾವರಣ ಇಲ್ಲಿ ಕಾಣುತ್ತೇವೆ. ವಸ್ತ್ರವ ತೊಳೆಯುವ ಕಾಯಕವನ್ನು ಮಾಚಯ್ಯನು ಪರಿಪಾಲಿಸಿದ ಬಗ್ಗೆ, ವಿವರಣೆ ಇಲ್ಲಿ ಇಡಲಾಗಿದೆ. ಕಲ್ಯಾಣದಲ್ಲಿ ಮಾಚಯ್ಯನ ಒಡನಾಟದ ಬಗ್ಗೆ ಅನೇಕ ಅಂಶಗಳ ಪ್ರಸ್ತಾಪವನ್ನು ಕಾಣುತ್ತೇವೆ. ಅನೇಕ ಶರಣರೊಂದಿಗೆ ಮಾಚಯ್ಯನು ಹೊಂದಿದ ಬಾಂಧವ್ಯಗಳ ಬಗ್ಗೆ ಮಹತ್ವದ ಅಂಶಗಳನ್ನು ಇಲ್ಲಿ ಹೇಳಲಾಗಿದೆ. ಬಿಜ್ಜಳನೊಡನೆ ನಡೆದ ಘಟನೆಗಳನ್ನು ಇಲ್ಲಿ ಕಾಣುತ್ತೇವೆ. ಮಾಚಯ್ಯನಿಗೆ ಛಲದಂಕ ವೀರವತಾರ ಎಂದಿರುವುದು ಕಂಡುಬರುತ್ತದೆ. ಇಲ್ಲಿನ ವರ್ಣನೆಗಳಲ್ಲಿ ಮಾಚಯ್ಯನ ಆಂತರಿಕ ಹಾಗೂ ಬಾಹ್ಯ ಗುಣ ಸ್ವರೂಪವನ್ನು ನಿರ್ಧರಿಸಿಬಹುದಾಗಿದ್ದು, ಆತನ ವೇಷಭೂಷಣಗಳ ವರ್ಣನೆ ವಿಶಿಷ್ಟವಾಗಿ ಮೂಡಿಬಂದಿದೆ. ಅನೇಕ ಬಗೆಯ ವಸ್ತ್ರಗಳ ಹೆಸರುಗಳು ಅಂದರೆ ನವಗಜ ಸೋಪು ಖಿಲ್ಲಿಗಳು, ಪೀತಾಂಬರ ಶಾಲು, ಹಳದಿ ಹಸಿರು ಸೆರಗಿನ ವಸ್ತ್ರಗಳು, ತರುಣಿಯರ ಸೀರೆಗಳು, ವಿವಿಧ ಬಗೆಯ ಕಪ್ಪಡಗಳ ಹೆಸರುಗಳು ಇಲ್ಲಿ ಕಾಣುತ್ತೇವೆ. ತನ್ನ ಕಾಯಕದಲ್ಲಿ ನಿಷ್ಠೆ ತೋರುತ್ತಾ ಬಂದಿರುವ ಅಂಶಗಳು ಇಲ್ಲಿ ಗಾಂಭೀರ್ಯದ ಸ್ವರೂಪದಲ್ಲಿ ಮೂಡಿಬಂದಿವೆ. ಮಾಚಯ್ಯ ಹಾಗೂ ರಾಜಾಡಳಿತದ ಅನೇಕ ಪ್ರಸ್ತಾಪಗಳು ಪರಸ್ಪರ ವೈರುಧ್ಯದ ನೆಲೆಯಲ್ಲಿ ಅನಾವರಣ ಗೊಂಡಿರುವುದನ್ನು ಕಾಣುತ್ತೇವೆ. ಈ ತಾರಾವಳಿಯ ಕೊನೆಯ ಭಾಗದ ಸಾಲುಗಳನ್ನು ಗಮನಿಸುವಾಗ ಮಾಚಯ್ಯನ ಕುರಿತಾಗಿ ಮಹತ್ವದ ಅಂಶಗಳು ತಿಳಿದುಬರುತ್ತವೆ.

ಅರಸು ಬಿಜ್ಜಳ ದಂಡಾಧೀಶನೊಡನೆ ಬಂದು
ಶರಣು ಹೊಕ್ಕನು ಮಾಚಿದೇವ ತಪ್ಪದೆನೆಂದು
ಗುರುವೆ ರಕ್ಷಿಸು ಕೃಪಾತರುವೆ ಭಕ್ತರ ಬಂಧು
ಮರೆಹೊಕ್ಕಿನೆನಲು ಮಾಚಯ್ಯ ಕರುಣಿಸೆಂದು
ಉರಿದ ಕಪ್ಪಡವಾನೆ ಸೇನೆ ಮಾರ್ಬಲವನು

ನೆರವಂತೆ ನರಹಿ ಪಾಲಿಸಿ ಕಳುಹಿದನಂದು
ಸುರರು ಪೂಮಳೆಗರದರು ಜಯ ಜಯತೆಂದು
ಶರಣ ಸಂಕುಳಕೆ ಮಾಚಯ್ಯ ಮುಕುಟವೆಂದು
ಕರುಣಿ ಶ್ರಿಗುರುಬಸವೇಶನೆ ಪಿತನೆಂದು
ಭರಿತವಲ್ಲಮಪ್ರಭು ಚೆನ್ನಬಸವ ಬಂದು
ಗುರು ಚರ ಪರವಿಷ್ಟ ಪ್ರಾಣ ಭಾವದಿ ನಿಂದು
ನಿರುತ ನಿಷ್ಕಲರೂಪನ । ಕಾರುಣ್ಯ ಸಾ–
ಗರ ವೀರಮಾಚಯ್ಯನ । ಮಹಿಮೆಯನು
ಬರದೋದಿ ಪಠಿಸುವನ ಬಂಧನ ಭವ
ದುರಿತ ದುಷ್ಕೃತ ನಾಶನ । ಮುಕ್ತ್ಯಂಗನೆ
ಬೆರದ ನಿರ್ಮಲಕಾಯನ । ಕರಾಂಬುಜ
ದರೆಯ ಸದ್ಗುರು ಶಾಂತನೊಳು ಲೀಯವಾದಾನ।

ಈ ನೆಲೆಯಲ್ಲಿ ಅನೇಕ ತಾರಾವಳಿಗಳನ್ನು ಗಮನಿಸುವಾಗ, ಶರಣರ ಕುರಿತಾದ ಅನೇಕ ಜೀವನ ಸಂಗತಿಗಳು, ಶರಣ ಸಂಸ್ಕೃತಿಯ ವಿಚಾರಧಾರೆಗಳು ತಿಳಿದುಬರುತ್ತವೆ. ಶಿವಗಣ ಸಹಸ್ರ ತಾರಾವಳಿಯಲ್ಲಿ ಶರಣರ ಹೆಸರುಗಳು ಉಲ್ಲೇಖಗೊಂಡಿರುವುದನ್ನು ಕಾಣುತ್ತೇವೆ. ಚೆನ್ನಬಸವೇಶ್ವರನ ತಾರಾವಳಿ ಅಷ್ಟಕ, ಇಷ್ಟಲಿಂಗ ತತ್ವ ತಾರಾವಳಿ, ಬಸವೇಶ್ವರನ ಅರಮನೆ ತಾರಾವಳಿ, ಅರವತ್ತು ಮೂರು ಪುರಾತನರ ತಾರಾವಳಿ ಸೇರಿದಂತೆ ಅನೇಕ ತಾರಾವಳಿಗಳು ಶರಣರ ಬಗ್ಗೆ ಮಹತ್ವದ ಅಂಶಗಳನ್ನು ತಿಳಿಸಿಕೊಡುತ್ತವೆ.

ಅಧ್ಯಯನದ ನೆಲೆಯಲ್ಲಿ ಇವುಗಳ ವಿವರಣೆಯ ಆಯ್ದ ಅಂಶಗಳು ಚರಿತ್ರೆಯ ಸಂಶೋಧನೆ, ಬರವಣಿಗೆಯ ನಿಟ್ಟಿನಲ್ಲಿ ಗಮನಾರ್ಹ ಅಂಶಗಳಾಗಿ ಕಂಡುಬರುತ್ತವೆ. ಇಲ್ಲಿ ಉಲ್ಲೇಖಗೊಂಡ ಸ್ಥಳ, ಘಟನಾವಳಿಗಳು, ಧಾರ್ಮಿಕ ಅಂಶಗಳು ಶರಣಯುಗದ ಅನೇಕ ಚಿಂತನೆಗಳನ್ನು, ಕಾರ್ಯ ಮಾರ್ಗಗಳನ್ನು ಪ್ರತಿನಿಧಿಸುವಂತಹುಗಳಾಗಿವೆ. ಈ ಬಗೆಯ ತಾರಾವಳಿ ಸಾಹಿತ್ಯವು ಶರಣರ ಆದರ್ಶ, ಚಿಂತನೆಗಳನ್ನು ಜನಮಾನಸದಲ್ಲಿ ನೆಲೆಗೊಳಿಸಲು, ಅನುಕರಣೆ, ಪಾಲನೆ ಮಾಡಲು ಮಹತ್ವದ ಸಾಹಿತ್ಯವಾಗಿದ್ದು ಭವಿಷ್ಯದ ದಿನಗಳಲ್ಲಿ ಇವುಗಳ ಕುರಿತಾದ ಇನ್ನಷ್ಟು ಆಯಾಮದ ಅಧ್ಯಯನ, ಚರ್ಚೆಗಳು, ವಿಚಾರಗೋಷ್ಠಿ, ಮುಂತಾದ ಅವಶ್ಯಕ ಕಾರ್ಯಗಳು ನಡೆಯಬೇಕಾಗಿದ್ದು, ಆ ಮೂಲಕ ನಮ್ಮ ಮುಂದಿನ ಪೀಳಿಗೆಯವರಿಗೆ ಬಸವಾದಿ ಶರಣರ ಸಾರ್ಥಕ ಬದುಕು ಅನುಕರಣೆಯ ನಡೆಗಳನ್ನು ತಿಳಿಸುವ ಕಾರ್ಯವಾಗಬೇಕು. ಪ್ರಸ್ತುತ ಲೇಖನದ ಮಿತಿಯಲ್ಲಿ ವಿಶ್ಲೇಷಣೆ, ಉಲ್ಲೇಖಗೊಂಡ ಆಯ್ದ ತಾರಾವಳಿಗಳನ್ನು ಸೇರಿದಂತೆ ಒಟ್ಟು ಅರವತ್ತೂರು(೬೩) ವಿವಿಧ ಬಗೆಯ ತಾರಾವಳಿಗಳನ್ನು ಸಂಪಾದನೆಯ ಶಿಸ್ತಿಗೆ ಒಳಪಡಿಸಿದ ಸಂಪಾದಕರಾದ ಡಾ. ವೀರಣ್ಣ ರಾಜೂರ ಹಾಗೂ ಪ್ರಕಾಶಕರಾದ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗ ಇವರು ಅಭಿನಂದನಾರ್ಹರು. ಶರಣ ಸಂಸ್ಕೃತಿಯ ಮರು ಅವಲೋಕನ ಅನುಕರಣೆಯ ದೃಷ್ಟಿಯಿಂದ ತಾರಾವಳಿ ಸಾಹಿತ್ಯವು ವಿಶಿಷ್ಟಪೂರ್ಣ ಸಾಹಿತ್ಯವಾಗಿ ನಿಲ್ಲುತ್ತದೆ.



# ಶರಣರ ವಚನಗಳು ಮತ್ತು ವಿಶ್ವಮಾನವ ಸಂದೇಶ

**ಡಾ. ಶಿವಾನಂದ ಟವಳಿ**
*ಕನ್ನಡ ಉಪನ್ಯಾಸಕರು*
*ಜೆ.ಎಸ್.ಎಸ್. ಆರ್.ಎಸ್. ಹುಕ್ಕೇರಿಕರ ಕಲಾ,*
*ವಾಣಿಜ್ಯ ಮತ್ತು ವಿಜ್ಞಾನ ಪದವಿಪೂರ್ವ ಮಹಾವಿದ್ಯಾಲಯ,*
*ವಿದ್ಯಾಗಿರಿ, ಧಾರವಾಡ–೦೪*
*೯೮೪೪೦೩೫೭೮೮*

೧೨ನೇ ಶತಮಾನದ ಶರಣರ ಚಿಂತನೆಗಳು, ಅವರು ಅಳವಡಿಸಿಕೊಂಡ ಜೀವನಶೈಲಿ, ಅನುಭಾವದ ನೆಲೆಯಲ್ಲಿ ರಚಿಸಿದ ವಚನಗಳೆಲ್ಲವೂ ಆಧುನಿಕ ಬದುಕಿಗೆ ದಾರಿದೀಪವಾಗಿವೆ. ಏಕೆಂದರೆ ಇಂದಿಗೂ ಗತಕಾಲದ ಮಾನವ ಸಂಘರ್ಷಗಳ ಸಂಖ್ಯೆ ಕ್ಷೀಣಿಸುವುದರ ಬದಲು ಸಮಸ್ಯೆಗಳು ಉಲ್ಬಣಗೊಳ್ಳುತ್ತಿವೆ. ಕೊಲೆ, ಸುಲಿಗೆ, ದರೋಡೆಯಂತಹ ಹೇಯ ಕೃತ್ಯಗಳೂ ಅನಾಚಾರ, ಅಕ್ರಮ, ಅತ್ಯಾಚಾರಗಳಂತಹ ಅಮಾನವೀಯ ಚಟುವಟಿಕೆಗಳೂ ಬಡವ–ಬಲ್ಲಿದ, ಉಚ್ಚ–ನೀಚ, ಮೇಲು–ಕೀಳಿನಂತಹ ತರತಮಭಾವಗಳು –ಇವು ೨೧ನೇ ಶತಮಾನದ ಜನರ ನೆಮ್ಮದಿಯನ್ನು ಕಸಿದುಕೊಂಡಿವೆ. ಜೊತೆಗೆ ಹಿಂಸೆ, ಹಸಿವು, ನೀರಡಿಕೆ, ಭ್ರಷ್ಟತೆ, ಉಗ್ರವಾದ, ಭಯೋತ್ಪಾದನೆ, ನಕ್ಸಲಿಸಂನಂತಹ ಪಿಡುಗುಗಳು ಈ ಕಾಲದ ಜನರ ಬದುಕನ್ನು ಇನ್ನಷ್ಟು ದುರ್ಭರಗೊಳಿಸಿವೆ. 'ಕಾಲ ಬದಲಾದರೂ ಕಾಯ ಬದಲಾಗಿಲ್ಲ' ಎಂಬಂತೆ ಮಾನವ ಕುಲದ ಸಮಸ್ಯೆಗಳು ಜಾಗತೀಕರಣದ ಸನ್ನಿವೇಶದಲ್ಲೂ ಜೀವಂತವಾಗಿವೆ.

ಕಾಲ ಅದೆಷ್ಟು ಕ್ರೂರಿಯಲ್ಲವೇ? ಒಳಿತು–ಕೆಡುಕುಗಳನ್ನು ಸರಿಸಮನಾಗಿ ಕೊಂಡೊಯ್ಯುತ್ತದೆ. ಹೂಗಳ ನಡುವೆ ಮುಳ್ಳುಗಳಿರುವಂತೆ ಒಳಿತು–ಕೆಡುಕುಗಳೂ ಪ್ರಕೃತಿ ಸಹಜವಾದವು. ಒಳಿತನ್ನು ಗೌರವಿಸಿ, ಕೆಡುಕನ್ನು ನಿವಾರಿಸಿ ಬದುಕಿದಾಗಲೇ ಬದುಕಿಗೊಂದು ಅರ್ಥ ಸಿಗುತ್ತದೆ. ಮಾನವನ ಬದುಕಿಗೆ ಶ್ರೇಷ್ಠತೆಯನ್ನು ತಂದುಕೊಟ್ಟವರು ಶರಣರು. ಸುಮಾರು ೮೫೦ ವರ್ಷಗಳ ಹಿಂದೆ ಶರಣರು ಬಾಳಿದ ಬದುಕು, ಚಿಂತನೆ, ವಚನಗಳೆಲ್ಲವೂ ಇಂದಿಗೂ ಪ್ರಸ್ತುತ ಎನಿಸಿವೆ.

ಶರಣರು ತಮ್ಮ ಅನುಭಾವವನ್ನು 'ವಚನ' ಎಂಬ ವಿಶಿಷ್ಟ ಸಾಹಿತ್ಯ ಪ್ರಕಾರದ ಮೂಲಕ ಬಿತ್ತಿದರು. ತಮ್ಮ ಬದುಕಿನ ತತ್ವವನ್ನು ಜನಮನಗಳಲ್ಲಿ ನೆಲೆಯೂರುವಂತೆ ಮಾಡಿದ್ದು 'ವಚನಗಳ' ಮುಖಾಂತರವೇ. ವಚನವೆಂದರೆ ಮಾತು, ಪ್ರಮಾಣ, ವಾಗ್ದಾನ ಎಂದರ್ಥ. ವಚನಗಳು ಶಿವಶರಣರ ಅನುಭಾವದ ನುಡಿಗಳು. ಶರಣ ಸಂಸ್ಕೃತಿಯ ಪ್ರತೀಕ. ಶರಣ ಸಂಸ್ಕೃತಿಯು ಲೋಕ ಕಲ್ಯಾಣವನ್ನು ಬಯಸಿದ ವಿಶ್ವದ ಮೊಟ್ಟಮೊದಲ ಸಂಸ್ಕೃತಿಯಾಗಿದೆ. ಶರಣ ಸಂಸ್ಕೃತಿಯು ಅಪ್ಪಟ 'ಕನ್ನಡ ಸಂಸ್ಕೃತಿ' ಎಂಬ ವಿಚಾರವನ್ನು ಮರೆಯುವ ಹಾಗಿಲ್ಲ. 'ಕನ್ನಡಿಗರೂ ವಿಶಾಲ ಹೃದಯದವರು' ಎಂಬ ಅಂಶವೂ ವಚನಗಳ ಮೂಲಕವೂ ಅಭಿವ್ಯಕ್ತವಾಗಿದೆ.

ಶರಣ ಸಂಸ್ಕೃತಿಯು 'ಮಾನವ ಕುಲ ಒಂದು' ಎಂದು ಒಗ್ಗೂಡಿಸಿ ವರ್ಗ–ವರ್ಣರಹಿತ ಸೌಹಾರ್ದ ಸಮಾಜದ ಸೃಷ್ಟಿಗೆ ನಾಂದಿ ಹಾಡಿದೆ. "ಮತ ಮನುಜ ಮತವಾಗಬೇಕು, ಪಥ

ವಿಶ್ವಪಥವಾಗಬೇಕು, ಮನುಷ್ಯ ವಿಶ್ವಮಾನವನಾಗಬೇಕು" ಎಂಬ ಕವಿ ಕುವೆಂಪು ಅವರ ಆಶಯ ಶರಣರ ಬದುಕಿನ ತತ್ವವಾಗಿದೆ. ಶರಣರ ವಿಚಾರಗಳು ಇಂದು ಮತ್ತು ನಾಳೆಗೂ ನಮ್ಮ ಸಮಾಜವನ್ನು ಉದ್ಧರಿಸುವ ಸೂತ್ರಗಳು. ಧರ್ಮ, ಜಾತಿ, ದಯೆ, ಕರುಣೆ, ಆಸ್ತಿಕತೆ, ಸಮಾನತೆ, ಕಾಯಕ, ಸಹಕಾರ, ಸಹಬಾಳ್ವೆ, ಸಹೋದರತೆ, ಬಂಧುತ್ವ, ದಾಸೋಹ ಜೀವನ ನಿಷ್ಠೆ, ಪರಿಶುದ್ಧತೆ, ಸದ್ಗುಣ, ಸದ್ವರ್ತನೆ, ಸದಾಚಾರ, ಮೌಢ್ಯ, ಮತ, ಪಂಥ ಮುಂತಾದವುಗಳು ವಿಶ್ವ ಮೌಲ್ಯಗಳು. ಇವು ವಿಶ್ವಮಾನವತೆ ಹಾಗೂ ವಿಶ್ವಬಂಧುತ್ವದ ಪರಿಕಲ್ಪನೆಗೆ ಕುರುಹಾಗಿವೆ. ಮಾನವೀಯ ಮೌಲ್ಯಗಳ ಬಗ್ಗೆಯೂ ದಾರ್ಶನಿಕ ಒಳಹುಗಳನ್ನು ಕೊಟ್ಟ ಶರಣರ ಚಿಂತನೆಗಳು ಯುಗಯುಗಕ್ಕೂ ಅನುಕರಣೀಯ.

ಜಗತ್ತಿನ ಎಲ್ಲ ರಾಷ್ಟ್ರದ ನಾಗರಿಕರೂ ಒಪ್ಪಿಕೊಂಡು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳ-ಬಹುದಾದ ಸಾರ್ವಕಾಲಿಕ ಮೌಲ್ಯಗಳು ಶರಣತತ್ತ್ವಗಳಲ್ಲಿ ಪ್ರತಿಪಾದಿತವಾಗಿವೆ. ವಿಶ್ವವೇ ಅನುಕರಿಸಬಹುದಾದ ವಿಶ್ವ ಮಾನವ ಪರಿಕಲ್ಪನೆಗಳನ್ನು ಬಸವಾದಿ ಶರಣರು ಅಭಿವ್ಯಕ್ತಿಸಿದ್ದಾರೆ. ಆದ್ದರಿಂದಲೇ ಬಸವಣ್ಣ ಅವರನ್ನು 'ವಿಶ್ವಗುರು' ಎಂದಿದ್ದಾರೆ. ಲೋಕದ ಜನರ ಮನಸ್ಸುಗಳನ್ನು ಬೆಸೆದು, ಮಾನವೀಯ ಸಂಬಂಧಗಳನ್ನು ಗಟ್ಟಿಗೊಳಿಸುವ ವಿಶ್ವ ಮಾನವತೆಗೆ ಸಾಕ್ಷಿಯಾದ ಶರಣರ ಕೆಲವು ಚಿಂತನೆಗಳು ಈ ಕೆಳಕಂಡಂತೆ ಇವೆ.

## ೧) ಮಾನವ ಧರ್ಮದ ಮೂಲ ದಯೆ, ಕರುಣೆ, ಅಂತಃಕರಣ

ಧರ್ಮ ಆರಂಭಗೊಳ್ಳುವುದೇ ದಯೆಯಿಂದ. ಧರ್ಮವೆಂಬುದು ಬದುಕುವ ವಿಧಾನ. ಅದು ಸಮಾಜದಲ್ಲಿ ಹೇಗೆ ಬದುಕಬೇಕೆಂಬುದನ್ನು ಕಲಿಸುತ್ತದೆ. ಒಳಿತು-ಕೆಡುಕುಗಳ ನಡುವೆ ಬಾಳುವಾಗ ಒಳಿತನ್ನು ಪರಿಪಾಲಿಸುವುದೇ ಧರ್ಮವಾಗಿದೆ. ಶರಣರು ಹೇಳಿದಂತೆ ಮಾನವ ಧರ್ಮದ ಮೂಲ ದಯೆ, ಕರುಣೆ, ಅಂತಃಕರಣವಾಗಿದೆ. ಇಂತಹ ಧರ್ಮದ ಪಾಲನೆಯಿಂದ ಜೀವನ ಸಾರ್ಥಕ. ತಾನು ಎಲ್ಲರಿಗಾಗಿ ಬಾಳುವುದೇ ನಿಜವಾದ ಧರ್ಮ. ಮಾನವ ಧರ್ಮದ ಕುರಿತು ಬಸವಣ್ಣನವರ ಪ್ರಸ್ತುತ ವಚನವು ಸರ್ವರ ಬದುಕಿಗೆ ಸ್ಫೂರ್ತಿಯನ್ನು ಒದಗಿಸುತ್ತದೆ.

**ದಯೆಯೆ ಧರ್ಮದ ಮೂಲವಯ್ಯ**
**ದಯೆಯಿಲ್ಲದ ಧರ್ಮ ಯಾವುದಯ್ಯ**
**ದಯೆ ಬೇಕು ಸಕಲ ಪ್ರಾಣಿಗಳೆಲ್ಲರಲಿ**
**ಕೂಡಲ ಸಂಗಮದೇವನಂತಲ್ಲದೊಲ್ಲನಯ್ಯ**

ಬಸವಣ್ಣನವರು ಹೇಳಿದ ಹಾಗೆ ದಯೆ, ಕರುಣೆ, ಅಂತಃಕರಣವು ಪರಸ್ಪರ ಒಡಮೂಡಬೇಕು. ಧರ್ಮದ ಮೂಲಾಧಾರವೇ ದಯೆ. ದಯೆಯೇ ಮನುಕುಲಕ್ಕೆ ಆದರ್ಶವಾದುದು. ದಯೆ, ಪರೋಪಕಾರವೇ ಬದುಕಿನ ಮರ್ಮವಾಗಿರಬೇಕು. ದಯೆಯು ಕೇವಲ ಮನುಕುಲಕ್ಕೆ ಮಾತ್ರ ಸೀಮಿತವಾಗಬಾರದು. ಅದು ಪ್ರಾಣಿ, ಪಕ್ಷಿ, ಕ್ರಿಮಿ-ಕೀಟ ಮುಂತಾದ ಸಕಲ ಜೀವಿಗಳಿಗೂ ಅನ್ವಯವಾಗುವಂತಹದ್ದು. 'ದಯೆ ಬೇಕು ಸಕಲ ಪ್ರಾಣಿಗಳೆಲ್ಲರಲಿ' ಎಂದು ಹೇಳಿದ್ದಾರೆ. ಪರಸ್ಪರ ಪ್ರೀತಿ, ಕರುಣೆ, ಅಂತಃಕರಣ, ದಯೆ, ಪ್ರೇಮದಂತಹ ಮಾನವೀಯ ಗುಣಗಳನ್ನು ಆಚರಿಸುವುದರೊಂದಿಗೆ ಶರಣರ ಧರ್ಮವು ವಿಶ್ವ ಮಾನವತೆಯನ್ನು ಸಾರುತ್ತದೆ.

ಶರಣರು ಅಹಿಂಸಾವಾದಿಗಳು. ಜಗತ್ತಿನ ಪ್ರತಿಯೊಂದು ಚರಾಚರಗಳಲ್ಲಿಯೂ ಶಿವತತ್ವವನ್ನು ಕಾಣುತ್ತಿದ್ದರು. ಶರಣರ ತತ್ವದಲ್ಲಿ ಅಭಿವ್ಯಕ್ತಗೊಂಡ ಅಹಿಂಸಾವಾದವು ಇಂದಿಗೂ ಪ್ರಪಂಚದ ಮೂಲೆಮೂಲೆಯಲ್ಲಿ ಅನುಷ್ಠಾನದಲ್ಲಿದೆ. 'ಕೊಲುವ ಧರ್ಮವನು ಒಯ್ದು ಒಲೆಯೊಳಗೆ ಹಾಕಲಿ' ಎಂಬ ಸರ್ವಜ್ಞನ ನುಡಿಯು ೧೨ನೇ ಶತಮಾನದ ಶರಣ ಸಂಸ್ಕೃತಿಯಿಂದ ಪ್ರೇರಿತವಾಗಿದೆ.



## ೨) ಮೇಲು-ಕೀಳುಗಳ ನಿರಾಕರಣೆ

ಲೋಕದ ಮಾನವರೆಲ್ಲ ಸಮಾನರು. ಮನುಕುಲದಲ್ಲಿ ತರತಮಗಳೆಂಬ ಭೇದಗಳಿಲ್ಲ. 'ಆಡಿದಂತೆ ಮಾಡುವವನು ರೂಢಿಯೊಳಗೆ ಉತ್ತಮನು' ಎಂಬ ಮಾತಿನಂತೆ ನುಡಿದಂತೆ ನಡೆದ ಶರಣರು ಮೇಲು-ಕೀಳನ್ನು ಪರಿಗಣಿಸದೆ ತುಳಿತಕ್ಕೆ ಒಳಗಾದವರ ದಾರಿದೀಪವಾದರು. ಲೋಕದ ಡೊಂಕನ್ನು ತಿದ್ದಿ-ತೀಡಲು ತಮ್ಮ ತನುಮನದ ಡೊಂಕನ್ನು ಸರಿಪಡಿಸಿಕೊಂಡರು. ಸಮಾಜದಲ್ಲಿ ಆಚರಣೆಯಲ್ಲಿದ್ದ ಅಸ್ಪೃಶ್ಯತೆಯ ನಿವಾರಣೆಗಾಗಿ ಶರಣರು ಅಪಾರ ಶ್ರಮವಹಿಸಿದರು. ಅಸ್ಪೃಶ್ಯತೆಯು ಮಾನವ ಕುಲವನ್ನು ಬಹುವಾಗಿ ಪೀಡಿಸಿದ ಸಮಸ್ಯೆಯಾಗಿದೆ. ಇಂತಹ ವರ್ಣವೈಷಮ್ಯವನ್ನು ನಿವಾರಿಸಲು ಪ್ರಯತ್ನಿಸಿದ ಮಹಾತ್ಮಾ ಗಾಂಧೀಜಿ, ಕುದ್ಮುಲ್ ರಂಗರಾವ್, ನೆಲ್ಸನ್ ಮಂಡೇಲಾ, ಮದರ್ ಥೇರೆಸಾ ಮುಂತಾದ ಮಹನೀಯರಿಗೆ ಶರಣರ ಬದುಕು ಪ್ರೇರಕವಾಗಿದೆ. 'ಕಪ್ಪು-ಬಿಳಿಯೆಂಬುದು ದೇಹದ ಹೊರಗೆ ಮಾತ್ರ. ಮನುಷ್ಯ ಅಂತರಂಗದಲ್ಲಿ ಒಂದೇ' ಎಂಬ ಮಂಡೇಲಾ ಅವರ ನುಡಿಗೆ ಶರಣ ಸಂಸ್ಕೃತಿಯು ಪ್ರೇರಕವಾಗಿರಬಹುದು. ಈ ಕೆಳಗಿನ ಅಕ್ಕಮಹಾದೇವಿ ಅವರ ವಚನ ವರ್ಣಸಮಾನತೆಗೆ ಸಾಕ್ಷಿಯಾಗಿದೆ.

**ಕಾಯ ಕರ್ರನೆ ಕಂದಿದರೇನಯ್ಯಾ**
**ಕಾಯ ಮಿರ್ರನೆ ಮಿಂಚಿದರೇನಯ್ಯಾ**
**ಅಂತರಂಗ ಶುದ್ಧವಾದ ಬಳಿಕ**
**ಚೆನ್ನಮಲ್ಲಿಕಾರ್ಜುನದೇವಯ್ಯಾ**
**ನೀನೊಲಿದ ಕಾಯವು ಹೇಗಿದ್ದಡೇನಯ್ಯಾ**

ಕಾಯವು ಸೃಷ್ಟಿಯ ವರದಾನ. ಅದನ್ನು ಶುದ್ಧವಾಗಿಟ್ಟುಕೊಂಡು ಸಚ್ಚಾರಿತ್ರ್ಯಗಳನ್ನು ಹೊಂದಬೇಕು. ಬಹಿರಂಗಕ್ಕಿಂತ ಅಂತರಂಗ ಶುಚಿಯಾಗಿರಬೇಕು. ಕಾಯ ವಿಚಾರಗಳನ್ನು ಮೀರಿ ಅಂತರಂಗದ ಪರಿಶುದ್ಧತೆಗೆ ಗೌರವ ನೀಡಬೇಕು. 'ಇವನಾರವ ಇವನಾರವ ಎಂದೆನಿಸದಿರಯ್ಯ ಇವನಮ್ಮವ ಇವನಮ್ಮವ ಎಂದೆನಿಸಯ್ಯ' ಎಂಬ ಬಸವಣ್ಣನವರ ನುಡಿಯಂತೆ ಶರಣ ಸಮಾಜವು ಕುಲ-ಗೋತ್ರ, ಜಾತಿ-ಪಂಥಗಳನ್ನು ಅಲ್ಲಗಳೆಯಿತು. ಶರಣರ ಚಿಂತನೆಗಳು ವಿಶ್ವ ಮಾನವ ಕಲ್ಯಾಣವನ್ನು ಬಯಸಿ ವಿಶ್ವಪ್ರೇಮಕ್ಕೆ ನಿದರ್ಶನವಾಗಿದೆ. ಶರಣರು ತಮ್ಮನ್ನು ಹಿರಿಯರೆಂದು ಭಾವಿಸಿ, ಇನ್ನೊಬ್ಬರನ್ನು ಕಿರಿಯರೆಂದು ತಿಳಿಯದೆ 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ವಚನಾಭಿಪ್ರಾಯದಂತೆ ಸಮಸ್ತ ಮನುಕುಲವನ್ನು ಅಪಾರವಾಗಿ ಪ್ರೀತಿಸುತ್ತಿದ್ದರು.

## ೩) ಹೆಣ್ಣು-ಗಂಡೆಂಬ ಭೇದವಿಲ್ಲ

ಜಗತ್ತಿನ ಪ್ರಮುಖ ಧರ್ಮಗಳಾದ ಕ್ರೈಸ್ತ, ಬೌದ್ಧ, ಇಸ್ಲಾಂ ಹಾಗೂ ಹಿಂದೂ (ಸನಾತನ) ಧರ್ಮಗಳು 'ಬಸವ ಧರ್ಮಕ್ಕೂ' ಮೊದಲೇ ಸ್ಥಾಪಿತಗೊಂಡು ಆಚರಣೆಯಲ್ಲಿವೆ. ಆದರೆ ಈ ಮೇಲಿನ ನಾಲ್ಕು ಧರ್ಮಗಳಲ್ಲಿ ಹೆಣ್ಣಿಗೆ ಯಾವುದೇ ಹಕ್ಕು-ಸ್ವಾತಂತ್ರ್ಯವನ್ನು ಕೊಟ್ಟಿರುವ ಉಲ್ಲೇಖಗಳಿಲ್ಲ. ಸಾಮಾಜಿಕ, ಧಾರ್ಮಿಕ ವಿಧಿವಿಧಾನಗಳಲ್ಲಿ ಹೆಣ್ಣಿಗೆ ನಿಷೇಧವಿದೆ. ೧೯ನೇ ಶತಮಾನ ಆರಂಭದವರೆಗೂ ಸ್ತ್ರೀಯರಿಗೆ ಯಾವುದೇ ಹಕ್ಕು-ಬಾಧ್ಯತೆಗಳನ್ನು ನೀಡಿರಲಿಲ್ಲ. ವಿಶ್ವದ ಅತಿದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವೆಂದು ಬೀಗುವ ಭಾರತದಲ್ಲಿ ಮೊಟ್ಟಮೊದಲ ಪದವಿಯನ್ನು ಪಡೆದ ಮಹಿಳೆಯೆಂದರೆ ಕೊರ್ನಿಯಾ ಸ್ವರಾಬ್ಜಿ. ಈ ಪದವಿಯನ್ನು ೧೮೮೫ರಲ್ಲಿ ಪುಣೆಯ ಡೆಕ್ಕನ್ ಕಾಲೇಜು ನೀಡಿತು. ಗಮನಿಸಿ ಅಂತಾರಾಷ್ಟ್ರೀಯ ರೋಟರಿ ಕ್ಲಬ್‌ಗಳಲ್ಲೂ ೧೯೮೯ರವರೆಗೆ ಮಹಿಳೆಯರಿಗೆ ಪ್ರವೇಶ ಕೂಡ ಇರಲಿಲ್ಲ.

ಶರಣರೆ, ಗಮನಿಸಿ ಮೋಕ್ಷ ಸಾಧನೆಯ ಮಾರ್ಗದಲ್ಲಿ 'ಹೆಣ್ಣು-ಗಂಡೆಂಬ ಭೇದವಿಲ್ಲ. ಅವರು ಸಮಾನರು' ಎಂಬುದು ಬಸವ ಧರ್ಮದ ತಿರುಳಾಗಿದೆ. ದೇಹವು ಪಂಚ

ಭೂತಾತ್ಮಕವಾದುದು. ಆತ್ಮವನ್ನು ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗವೆಂದು ಗುರುತಿಸಲಾಗದು. ಆದುದರಿಂದ ಮಾನವರಲ್ಲಿ ತರತಮ ಭಾವನೆಗಳಿಲ್ಲ. 'ಮಾನವ ದೇಹದಲ್ಲಿರುವ ಆತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ' ಎಂದು ಶರಣೆ ಗೊಗ್ಗವ್ವೆ ಈ ಕೆಳಗಿನ ವಚನದಲ್ಲಿ ನಿರೂಪಿಸಿದ್ದಾಳೆ.

**ಮೊಲೆ ಮುಡಿ ಬಂದೆಡೆ ಹೆಣ್ಣೆಂಬರು**
**ಮೀಸೆ ಕಾಸೆ ಬಂದೆಡೆ ಗಂಡೆಂಬರು**
**ಈ ಉಭಯದ ಜ್ಞಾನವು**
**ಹೆಣ್ಣೋ ಗಂಡೋ ನಾಸ್ತಿನಾಥ**

ತಾಯಿಯ ಗರ್ಭದಲ್ಲಿರುವ ಮಗು ಹೆಣ್ಣೋ ಗಂಡೋ ಎಂದು ತಿಳಿಯುವ ಪೂರ್ವದಲ್ಲಿಯೇ ಲಿಂಗದೀಕ್ಷೆಯನ್ನು ನೀಡುವ ಪರಂಪರೆ ಬಸವ ಧರ್ಮದಲ್ಲಿದೆ. ಶರಣರು ಪೂಜಿಸುವ ಇಷ್ಟಲಿಂಗವನ್ನು ಸ್ತ್ರೀ-ಪುರುಷರೆಂಬ ಭೇದವಿಲ್ಲದೇ ಯಾರಾದರೂ ಧರಿಸಬಹುದು. ಪೂಜಿಸಲೂಬಹುದು. ಆದರೆ ಅನ್ಯಧರ್ಮಗಳಲ್ಲಿ ಇಂತಹ ಅವಕಾಶಗಳಿಲ್ಲ. ಸಾಮಾಜಿಕ ಮತ್ತು ಧಾರ್ಮಿಕ ಅವಕಾಶಗಳಿಲ್ಲದ ಸಂದರ್ಭದಲ್ಲಿ ಅಕ್ಕಮಹಾದೇವಿ, ಅಕ್ಕನಾಗಮ್ಮ, ಆಯ್ದಕ್ಕಿ ಲಕ್ಕಮ್ಮ, ಗಂಗಾಂಬಿಕೆ, ನೀಲಾಂಬಿಕೆ, ಮುಕ್ತಾಯಕ್ಕ, ಸತ್ಯಕ್ಕ, ಗೊಗ್ಗವ್ವೆ ಇನ್ನೂ ಮುಂತಾದ ಶರಣೆಯರು ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯದೊಂದಿಗೆ ಜಗದ ಬೆಳಕಾದರು.

ಶರಣರು 'ಅನುಭವ ಮಂಟಪ'ವೆಂಬ ವೇದಿಕೆಯನ್ನು ಕಲ್ಪಿಸಿ ಮಹಿಳೆಯರಿಗೆ ಸಮಾನ ಅವಕಾಶ ನೀಡಿದರು. ಮಹಿಳೆಯರಿಗೆ ಸಮಾನತೆ ಕಲ್ಪಿಸಿದ ವಿಶ್ವದ ಮೊಟ್ಟಮೊದಲ ಸಮಾಜವೆಂದರೆ ಅದು 'ಶರಣ ಸಮಾಜ'. ಜೇಡರ ದಾಸಿಮಯ್ಯ ಅವರ 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬ ನುಡಿಯಂತೆ ಈರ್ವರೊಂದಾಗಿ ಮಾಡಿದ ಕಾರ್ಯವು ಶ್ರೇಷ್ಠ. ಎಲ್ಲ ಕ್ಷೇತ್ರಗಳಲ್ಲಿಯೂ ಸ್ತ್ರೀಯರಿಗೆ ಸರಿಸಮಾನವಾದ ಹಕ್ಕನ್ನು ಬಸವಧರ್ಮವು ಕಲ್ಪಿಸಿಕೊಟ್ಟಿದೆ. ಆದ್ದರಿಂದಲೇ ಬಸವ ಧರ್ಮವು ವಿಶ್ವಮಾನ್ಯವಾಗಿದೆ.

**೪) ಸರ್ವವೃತ್ತಿಗಳೂ ಸಮಾನ**

ಶರಣರು ಆಡಂಬರವಿಲ್ಲದೆ ಸಮಾಜದ ಉದ್ಧಾರಕ್ಕಾಗಿ ತನುಮನದಿಂದ ಕೂಡಿ ನಿಸ್ವಾರ್ಥ ಸೇವೆ ಮಾಡಿದ್ದಾರೆ. ಶೋಷಣೆಗೆ ಒಳಗಾಗಿದ್ದ ಕುಲಕಸುಬುದಾರರನ್ನು, ಶ್ರಮಜೀವಿಗಳನ್ನು ಸಾಮಾಜಿಕ ಏಣಿ ಶ್ರೇಣಿಯಿಂದ ದೂರಮಾಡಿ ಸರ್ವರಲ್ಲಿ ಏಕತೆಯ ಭಾವನೆ ಮೂಡಿಸಿದರು. 'ಸರ್ವರಿಗೆ ಸಮಪಾಲು ಸರ್ವರಿಗೆ ಸಮಬಾಳು' ಎಂಬ ಬದುಕನ್ನು ಬದುಕಿದ ಶರಣರು ವಿಶ್ವಕ್ಕೆ ಮಾದರಿಯಾಗಿದ್ದಾರೆ. ದುಡಿಯುವ ವರ್ಗಕ್ಕೆ ಸಂಬಂಧಿಸಿದ ಶೂದ್ರರು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಆರ್ಥಿಕ ಕಟ್ಟಳೆಗಳಿಂದ ನರಕಯಾತನೆ ಅನುಭವಿಸುತ್ತಿದ್ದ ಸಂದರ್ಭದಲ್ಲಿ ಶರಣರು ಶ್ರಮಿಕ ಬಡವರ ಪರವಾಗಿ ಸಮಾನತೆಯ ವ್ಯವಸ್ಥೆಯನ್ನು ರೂಪಿಸಿದರು. ಮಾಡುವ ಕಾಯಕದಿಂದ ಅಡ್ಡನಾಮಗಳಿಂದ ಗುರುತಿಸುವ ರೂಢಿಯಿದೆಯೇ ವಿನಃ ಅವರೆಲ್ಲ ಅಂತ್ಯಜರಲ್ಲ ಎಂಬುದನ್ನು ನಿರೂಪಿಸುವುದಕ್ಕೆ ಬಸವಣ್ಣನವರ ಈ ಕೆಳಗಿನ ವಚನ ಸಾಕ್ಷಿಯಾಗಿದೆ.

**ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ**
**ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರವನಾದ**
**ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ**
**ಇದು ಕಾರಣ ಕೂಡಲಸಂಗಮದೇವಾ**
**ಲಿಂಗಸ್ಥಲವನರಿಯದವನೇ ಕುಲಜನು**

ಮಾನವನ ಬದುಕಿಗೆ ಉದ್ಯೋಗ ಅನಿವಾರ್ಯ. ತಮ್ಮ ಜೀವನ ನಿರ್ವಹಣೆಗಾಗಿ ಸೃಜನಶೀಲತೆಯನ್ನು ಪ್ರಕಟಿಸುವುದು ಅವಶ್ಯಕ. ಚಮ್ಮಾರಿಕೆ, ಕುಂಬಾರಿಕೆ, ಕಮ್ಮಾರಿಕೆ, ನೇಯುವಿಕೆ, ಹೆಣೆಯುವಿಕೆ, ನೂಲುವಿಕೆ ಹೀಗೆ ಹಲವಾರು ಕುಲಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ



ಕುಶಲಕರ್ಮಿಗಳನ್ನು ಗುರುತಿಸಿದರು. ಅವರ ವೃತ್ತಿಗಳನ್ನು 'ಕಾಯಕ'ಗಳೆಂದು ಗೌರವಿಸಿದ ಕೀರ್ತಿ ಶರಣರಿಗೆ ಸಲ್ಲುತ್ತದೆ. ವೃತ್ತಿಗಳನ್ನು ಜಾತಿಗಳನ್ನಾಗಿಸಿದ ಪೂರ್ವಧರ್ಮಗಳ ವಿರುದ್ಧವಾಗಿ ಶರಣರು ವಚನ ಚಳುವಳಿ ನಡೆಸಿದರು. ನಾಡಿನ ಸಕಲ ಕಾಯಕ ಜೀವಿಗಳನ್ನು ಒಂದುಗೂಡಿಸಿ ಸದಾಚಾರ, ಸದ್ವರ್ತನೆಗಳನ್ನು ಬಿತ್ತಿದರು.

ಕಲ್ಯಾಣದಲ್ಲಿ ಸಾವಿರಾರು ಸಂಖ್ಯೆಯ ಶರಣರು ನೆಲೆ ಪಡೆದಿದ್ದರು. ಅವರಲ್ಲಿ ೩೦೦ಕ್ಕೂ ಹೆಚ್ಚು ಬಗೆಯ ಕಾಯಕಗಳನ್ನು ನಿರ್ವಹಿಸುತ್ತಿದ್ದರು. ಇವರಲ್ಲಿ ಯಾವುದೇ ಭೇದವಿರಲಿಲ್ಲ. ಆದರೆ ಆಧುನಿಕ ಪ್ರಪಂಚದಲ್ಲಿ ಕಾಯಕದ ಹೆಸರಿನಲ್ಲಿ ತರತಮಗಳು ಉಂಟಾಗಿದೆ. ಕಾಯಕದಲ್ಲಿ ಶ್ರೇಣಿಗಳನ್ನು ಚಾಲ್ತಿಗೆ ತಂದ ನವನಾಗರಿಕ ಸಮಾಜವು ವೇತನದಲ್ಲಿಯೂ ತಾರತಮ್ಯವನ್ನು ತೋರುತ್ತಿದೆ. ಆಧುನಿಕ ಸಮಾಜದ ತರತಮ ನೀತಿಗೆ 'ಸಮಾನ ಕಾಯಕ ಸಮಾನ ವೇತನ' ಎಂಬ ಶರಣರ ತತ್ವ ನೆರವಾಗಬಲ್ಲುದು.

**೫) ಮಾನವ ಬದುಕಿಗೆ ಭೂಷಣ-ಕಾಯಕ**

ಮಾನವನ ವ್ಯಕ್ತಿತ್ವ ಹಾಗೂ ಬದುಕು ಶ್ರೇಷ್ಠವಾಗಲು ಉದ್ಯೋಗವು ಮಹತ್ವವನ್ನು ಪಡೆದಿದೆ. ಉದ್ಯೋಗವನ್ನು ಶರಣರು 'ಕಾಯಕ' ಎಂದಿದ್ದಾರೆ. ಪ್ರತಿಯೊಬ್ಬರು ಒಂದು ಕಾಯಕವನ್ನು ಹೊಂದಿರಬೇಕೆಂಬುದು ಅಂದಿನ ಶರಣರ ಸಮಾಜದ ಪ್ರಮುಖ ಲಕ್ಷಣವಾಗಿದೆ. ಕಾಯಕ ಯಾವುದೇ ಆಗಿರಲಿ ಆತ್ಮೋನ್ನತಿಗಾಗಿ ಕಾಯಕ ಅತ್ಯಗತ್ಯ. ಕಾಯಕ ಮಾಡದೇ ಉಣ್ಣುವುದು ಶರಣರ ದೃಷ್ಟಿಯಲ್ಲಿ ಆತ್ಮವಂಚನೆ. ಕಾಯಕವು ಪರಮ ಪವಿತ್ರವೆಂದು ಭಾವಿಸಿ ತನುಮನ ಶುದ್ಧಿಯಿಂದ ಕಾಯಕದೊಳಗೆ ನಿರತರಾಗುತ್ತಿದ್ದರು. 'ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು ಲಿಂಗಪೂಜೆಯಾದಡೂ ಮರೆಯಬೇಕು' ಎಂಬ ಶರಣ ಆಯ್ದಕ್ಕಿ ಮಾರಯ್ಯನ ನುಡಿಯು ಕಾಯಕದಲ್ಲಿಯೇ ಕೈಲಾಸವನ್ನು ಅರಸುವಲ್ಲಿ ಪ್ರೇರಣೆ ನೀಡುತ್ತದೆ. ಶರಣರು ಜೀವನೋಪಾಯಕ್ಕಾಗಿ ಒಂದೊಂದು ಕಾಯಕವನ್ನು ಆಯ್ದುಕೊಂಡು ಕಾಯಕಕ್ಕೆ ಪಾವಿತ್ರ್ಯತೆ ಕೊಟ್ಟಿದ್ದಾರೆ. 'ಕಾಯಕ ಸಿದ್ಧಾಂತ'ಕ್ಕೆ ಒಂದು ವ್ಯಾಖ್ಯಾನ ಕೊಟ್ಟಿದ್ದು ಶರಣರು. ಅದಕ್ಕೆ ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ನೀಡಿದ ನಿದರ್ಶನ ಇಂತಿದೆ.

**ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ**
**ಸತ್ಯಶುದ್ಧವಿಲ್ಲದುದು ಕಾಯಕವಲ್ಲ**
**ಆಸೆಯೆಂಬುದು ಭವದ ಬೀಜ**
**ನಿರಾಸೆಯೆಂಬುದು ನಿತ್ಯ ಮುಕ್ತಿ**
**ಉರಿಲಿಂಗಪೆದ್ದಿಗಳರಸರಲ್ಲಿ ಸದರವಲ್ಲ ಕಾಣವ್ವ**

'ಕೃತ್ಯಕಾಯಕವಿಲ್ಲದವರು ಭಕ್ತರಲ್ಲ' ಎಂಬ ನುಡಿಯ ಮೂಲಕ ಪ್ರತಿಯೊಬ್ಬರೂ ಕಾಯಕವನ್ನು ಮಾಡಬೇಕೆಂಬುದನ್ನು ಸಾರಿದ್ದಾರೆ. ಆದರೆ ಮಾಡುವ ಕಾಯಕವು ಸತ್ಯಶುದ್ಧವಾಗಿರಬೇಕು. ಕಾಯಕದಿಂದ ಬಂದ ಧನವು ದಾಸೋಹಕ್ಕೆ ಬಳಕೆಯಾಗಬೇಕೆಂಬುದು ಶರಣರ ಆಶಯ. ಶರಣರ ದೃಷ್ಟಿಯಲ್ಲಿ ಕಾಯಕವು ಉತ್ಪಾದನೆಯಾದರೆ ದಾಸೋಹವು ವಿತರಣೆಯಾಗಿದೆ.

'ಪಾಪಿಯ ಧನ ಪ್ರಾಯಶ್ಚಿತ್ತಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ' ಎಂಬ ಬಸವಣ್ಣನವರ ನುಡಿಯಂತೆ ಲಂಚ, ಮೋಸ, ವಂಚನೆಯಿಂದ ಗಳಿಸಿದ ಹಣವು ಸತ್ಕಾರ್ಯಗಳಿಗೆ ಬಳಸಲಾಗದು. ಶ್ರಮಸಂಸ್ಕೃತಿಯಿಂದ ಗಳಿಸಿದ ಯೋಗ್ಯ ಹಣವೇ ಸತ್ಕಾರ್ಯಗಳಿಗೆ ಸಲ್ಲುವುದು ಎಂಬುದು ಶರಣರ ತತ್ವ. 'ಆವ ಕಾಯಕವಾದಡೂ ಸ್ವಕಾಯಕವ ಮಾಡು' ಎಂಬ ಶರಣ ಲದ್ದೆಯ ಸೋಮಣ್ಣನ ನುಡಿಯು ಸ್ವಂತ ಉದ್ಯೋಗಕ್ಕೆ ಪ್ರೇರಣೆ ನೀಡುತ್ತದೆ. ಅಲ್ಲದೆ ಇಂದಿನ

ಯುವಪೀಳಿಗೆಗೆ ಆದರ್ಶ ಮಾದರಿಯಾಗಿದೆ. ನುಲಿಯ ಚಂದಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ಡೋಹರ ಕಕ್ಕಯ್ಯ, ಆಯ್ದಕ್ಕಿ ಲಕ್ಕಮ್ಮ, ಆಯ್ದಕ್ಕಿ ಮಾರಯ್ಯ, ಲದ್ದೆಯ ಸೋಮಣ್ಣ, ಜೇಡರ ದಾಸಿಮಯ್ಯ, ಸೂಳೆ ಸಂಕವ್ವೆ ಇನ್ನೂ ಮುಂತಾದ ಹೆಸರಗಳೂ ಕಾಯಕದಿಂದಲೇ ರೂಪುಗೊಂಡಿದ್ದು ಕಾಯಕದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತವೆ.

**೬) ಒಂದೇ ದೈವ-ಒಂದೇ ಧರ್ಮ**

ಶರಣರು 'ಲಿಂಗ' ಎಂಬ ಅಮೂರ್ತ ಪರಿಕಲ್ಪನೆಯನ್ನು ಆಚರಣೆಗೆ ತಂದರು. ಪ್ರಕೃತಿಯು ಗೋಳಾಕಾರವಾಗಿದೆಂದೂ ಅರಿತು ಲಿಂಗಾಚರಣೆಯನ್ನು ಜಾರಿಗೆ ತಂದ ಶರಣರು ಪ್ರಾಣಿಶಾಸ್ತ್ರ, ಮನಃಶಾಸ್ತ್ರದಲ್ಲಿ ನಿಪುಣರೆಂದು ಕಂಡುಬರುತ್ತದೆ. ಮಾನವನ ಏಕಾಗ್ರತೆಗೆ ಸಾಧನವಾಗಲು ಶ್ಯಾಮಲವರ್ಣದ ಗೋಳಾಕೃತಿಯು ಸಹಕಾರಿ ಎಂಬುದನ್ನು ಅರಿತಿದ್ದಾರೆ. ದೇವನೊಬ್ಬ ನಾಮ ಹಲವು. ಜಗತ್ತಿನ ಎಲ್ಲ ದೈವಗಳೂ ಒಂದೇ. ಆದರೆ ಹೆಸರುಗಳಲ್ಲಿ ಭಿನ್ನತೆಯಿದೆ. ಎಲ್ಲ ಹೆಸರುಗಳು ಒಂದೇ ದೈವಕ್ಕೆ ಕರೆದ ಹೆಸರುಗಳಾಗಿವೆ. ದಯೆಯೇ ದೈವವಾದರೆ ಸದಾಚಾರಗಳೇ ಧರ್ಮ. ಶರಣರು ಸರ್ವ ಸಮತಾಭಾವದೊಂದಿಗೆ ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಮನಸ್ಸೇ ದೈವವೆಂದು ಅರಿತುಕೊಂಡಿದ್ದಾರೆ.

**ಉದಕದೊಳಗೆ ಬಚ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತು**
**ಸಸಿಯೊಳಗಣ ರಸದ ರುಚಿಯಂತಿದ್ದಿತು**
**ನನೆಯೊಳಗಣ ಪರಿಮಳದಂತಿದ್ದಿತು**
**ಕೂಡಲಸಂಗಮದೇವ ಕನ್ನೆಯ ಸ್ನೇಹದಂತಿದ್ದಿತು.**

ದೈವದ ಇರುವಿಕೆಗೆ ಬಸವಣ್ಣನವರು ಕಂಡಂತಹ ವಿಚಾರವು ವಚನದಲ್ಲಿ ಅಡಗಿದೆ. ದೇವರು ನಿರಾಕಾರ. ಆತ ಸೃಷ್ಟಿಯ ಸಕಲ ಚರಾಚರಗಳಲ್ಲಿಯೂ ನೆಲೆಸಿದ್ದಾನೆಂಬುದು ಅವರ ವಾದ. 'ಆ ದೇವ ಈ ದೇವ ಮಹಾದೇವನೆನಬೇಡ ಭುವನದ ಜೀವಿಗಳಿಗಾದವನೇ ದೇವ' ಎಂಬ ಸರ್ವಜ್ಞನ ನುಡಿಯಂತೆ ಆಪತ್ತಿಗಾದವನೆ ದೇವರು. ಸದಾಚಾರಗಳನ್ನು ಹೊಂದಿದ ದೇಹವು ದೇವರ ನೆಲೆಯಾಗಿದೆ. 'ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ' ಎಂಬ ನುಡಿಯು ದೇಹವು ದೇವಸ್ಥಾನವೆಂಬುದನ್ನು ಸಾರುತ್ತದೆ. ಈ ದೇಹವು ಸದಾಕಾಲ ಲೋಕಕಲ್ಯಾಣವನ್ನು ಬಯಸುವುದೇ ಧರ್ಮ. ಅದು ವಿಶ್ವಮಾನವ ಧರ್ಮ.

**೭) ವೇದಾಗಮಗಳಿಗಿಂತ ಬದುಕು ಶ್ರೇಷ್ಠ**

ಬ್ರಹ್ಮಜ್ಞಾನ ಬೋಧನೆ ಮಾಡುವ ಕೆಲಸವು ಅತ್ಯಂತ ಪವಿತ್ರವಾದುದು. ಆದರೆ ಬೋಧಕನು ಇಹದ ಭೋಗಭಾಗ್ಯಗಳನ್ನೆಲ್ಲ ಮೀರಿ ನಿಂತು ವಿರಾಗಿಯಾಗಿರಬೇಕು. ತನ್ನ ಹೊಟ್ಟೆಪಾಡಿಗಾಗಿ ಪವಿತ್ರ ಕಾಯಕಕ್ಕೆ ಕಳಂಕ ತರಬಾರದು. ವೇದಶಾಸ್ತ್ರಗಳನ್ನು ಬರೆದು ಬೋಧಿಸುವುದಕ್ಕಿಂತ ಬದುಕುವುದು ಶ್ರೇಷ್ಠವೆಂಬುದು ಶರಣರ ನಂಬಿಕೆ. ಏಕೆಂದರೆ ವೇದ, ಶಾಸ್ತ್ರ, ಧರ್ಮಗ್ರಂಥವನ್ನು ಓದಿದ ಪಂಡಿತರು ಶರಣರಲ್ಲ. ಆದರೆ ಅವರು ನಿರ್ಮಲ ಅಂತಃಕರಣ, ಭಾವಶುದ್ಧತೆಯನ್ನು ಹೊಂದಿದವರು.

ಉನ್ನತ ವರ್ಣದ ಜನ ವೇದ, ಶಾಸ್ತ್ರ, ಸ್ಮೃತಿ, ಪುರಾಣಗಳನ್ನು ತಮ್ಮ ಆಸ್ತಿಯನ್ನಾಗಿಸಿ ಕೊಂಡು, ಸಂಸ್ಕೃತದಲ್ಲಿ ಪಠಿಸುತ್ತ ಇತರ ವರ್ಣದವರನ್ನು ಮೂಢರೆಂದು ಕಾಣುತ್ತಿದ್ದರು. ಅಂತಹ ಸಂದರ್ಭದಲ್ಲಿ ಶರಣರು ಬದುಕಿನ ಶ್ರೇಷ್ಠತೆಯ ಕುರಿತು ಚಿಂತಿಸಿದರು. ವೇದಾಗಮಗಳನ್ನು ಅಲ್ಲಗಳೆದ ಶರಣ ಸೊನ್ನಲಿಗೆ ಸಿದ್ಧರಾಮ ಅವರು 'ನಡೆ-ನುಡಿಯೊಂದಾದ ಬದುಕಿನಲ್ಲಿ ಮಹಾಲಿಂಗ ನೆಲೆಸುತ್ತದೆ' ಎಂದು ತಿಳಿಸಿದ್ದಾರೆ.

**ನಮ್ಮ ನಡಾವಳಿಗೆ**



**ನಮ್ಮ ಪುರಾತನರ ನುಡಿಯೇ ಇಷ್ಟವಯ್ಯ**
**ಸ್ಮೃತಿಗಳು ಸಮುದ್ರದ ಪಾಲಾಗಲಿ**
**ಶ್ರುತಿಗಳು ವೈಕುಂಠವ ಸೇರಲಿ**
**ಆಗಮಗಳು ವಾಯುವ ಹೊಂದಲಿ**
**ಎಮ್ಮ ನುಡಿ ಕಪಿಲಸಿದ್ಧ ಮಲ್ಲಿಕಾರ್ಜುನ**
**ಮಹಾಲಿಂಗದ ಹೃದಯದೊಳು ಗ್ರಂಥಿಯಾಗಿರಲಿ**

ವೇದವನೋದಿದರೆ ಬದುಕಿನ ವ್ಯಾದಿ ಪರಿಹಾರವಾಗದೆಂಬ ನಂಬಿಕೆ ಶರಣರದು. 'ವೇದವನೋದಿ ಕೇಳಿದಡೇನು ವೇದಜ್ಞನಪ್ಪನಲ್ಲದೇ ಭಕ್ತನಲ್ಲ' ಎಂಬುದು ಶರಣೆ ಕಾಳವ್ವೆಯ ಅಭಿಪ್ರಾಯ. ನಮ್ಮ ನಡೆ-ನುಡಿಗಳಲ್ಲಿ ಶುದ್ಧತೆಯಿದ್ದರೆ ಅದುವೇ ಶ್ರೇಷ್ಠತೆ ಬದುಕು ಪವಿತ್ರವಾಗಿದ್ದರೆ, ಆಚಾರ-ವಿಚಾರಗಳಲ್ಲಿ ಶುದ್ಧತೆ, ಕಾಯ-ಕಾಯಕದಲ್ಲಿ ಬದ್ಧತೆಯಿದ್ದರೆ ಸಾಕೆಂಬುದು ಶರಣರ ಚಿಂತನೆಗಳಲ್ಲಿ ಒಡಮೂಡಿದೆ.

**೮) ನೀತಿನೇಮಗಳೆಂಬ ಕಟ್ಟಳೆಗಳಿಗೂ ಮಿಗಿಲಾದದ್ದು ಮನುಷ್ಯತ್ವ**

ಅರ್ಚನೆ-ಪೂಜೆ, ಮಂತ್ರ-ತಂತ್ರ, ಧೂಪ-ದೀಪಾರತಿಯಂತಹ ನೀತಿ-ನಿಯಮಗಳು ಮಾನವ ಬದುಕಿನ ಮೌಢ್ಯಗಳಾಗಿವೆ. ಮೂರ್ತಿಪೂಜೆಯನ್ನು ಖಂಡಿಸಿದ ಶರಣರು ಶುಷ್ಕಾಚಾರಗಳನ್ನು ವಿರೋಧಿಸಿದ್ದಾರೆ. 'ಗುಡಿಚರ್ಚು ಮಸೀದಿಗಳ ಬಿಟ್ಟು ಹೊರಬನ್ನಿ, ಬಡತನವ ಬುಡಮುಟ್ಟ ಕೀಳಬನ್ನಿ, ಮೌಢ್ಯತೆಯ ಮಾರಿಯನು ಹೊರದೂಡಲೈತನ್ನಿ' ಎಂಬ ಕುವೆಂಪು ಅವರ ವಾಣಿಯು ಶರಣ ನುಡಿಗಳಿಂದ ಪ್ರೇರಿತವಾಗಿದೆ. ವಿಚಾರವಾದಿ ಶರಣೆ ಸತ್ಯಕ್ಕ 'ನೈತಿಕತೆ, ಸದಾಚಾರಗಳೇ ನಿಜವಾದ ಪೂಜೆ' ಎಂದಿದ್ದಾಳೆ.

**ಅರ್ಚನೆ ಪೂಜೆ ನೇಮವಲ್ಲ**
**ಮಂತ್ರ ತಂತ್ರ ನೇಮವಲ್ಲ**
**ದೀಪಧೂಪಾರತಿ ನೇಮವಲ್ಲ**
**ಪರಧನ ಪರಸ್ತ್ರೀ ಪರದೈವಂಗಳಿಗೆರದಿಪ್ಪುದೇ**
**ನೇಮ ಶಂಭು ಜಕ್ಕೇಶ್ವರನಲ್ಲಿ**
**ಇವು ಕಾಣಿರಣ್ಣ ನಿತ್ಯನೇಮ**

ಮಾನವ ಬದುಕಿಗೆ ಅಗತ್ಯವಾದವು ಅರ್ಚನೆ ಪೂಜೆಯೆಂಬ ಕಟ್ಟಳೆಗಳಲ್ಲ. ಬದಲಾಗಿ ಪರಧನ, ಪರಸ್ತ್ರೀ, ಪರದೈವಗಳ ಮೋಹಕ್ಕೆ ಒಳಗಾಗದೆ ಬದುಕುವುದೇ ಶ್ರೇಷ್ಠತೆಯನ್ನು ತಂದುಕೊಡುತ್ತದೆ. ಮಂತ್ರ-ತಂತ್ರ, ದೀಪಧೂಪಾರತಿ ಇವೆಲ್ಲವು ಬಾಹ್ಯ ಆಡಂಬರಗಳಾಗಿವೆ. 'ಹಸಿವಿಲ್ಲದ ಬೊಂಬೆಗೆ, ತೃಷೆಯಿಲ್ಲದ ನೀರೆರೆಯುವುದು ಸೂಕ್ತವೇ?' ಎಂದು ಜೇಡರ ದಾಸಿಮಯ್ಯ ಪ್ರಶ್ನಿಸುವ ಮೂಲಕ ಶರಣ ಸಂಸ್ಕೃತಿಯನ್ನು ಸಾರುತ್ತಾರೆ.

**೯) ಪರಸ್ಪರ ಸೌಹಾರ್ದತೆ, ಸಹಕಾರದಿಂದ ಐಕ್ಯತೆ ಸಾಧ್ಯ**

ಲೋಕದ ಜನರಲ್ಲಿ ಐಕ್ಯತೆ ಒಡಮೂಡಬೇಕಾದರೆ ಪರಸ್ಪರ ಸಹಕಾರ ಸೌಹಾರ್ದತೆಯ ಅತಿಮುಖ್ಯ. ಮನುಷ್ಯ ಮನುಷ್ಯರ ನಡುವೆ ದ್ವೇಷ ಅಸೂಯೆಗಳು ಹೆಚ್ಚುತ್ತಿರುವ ಸಂದರ್ಭದಲ್ಲಿ ರಾಷ್ಟ್ರ-ರಾಷ್ಟ್ರಗಳ ನಡುವೆ ಅಂತಃಕಲಹಗಳು ಉಂಟಾಗುತ್ತಿವೆ. ಮನುಕುಲದಲ್ಲಿ ನೆಲೆಯೂರ ಬೇಕಾದ ಮಾನವೀಯತೆ ಆಧುನಿಕ ಪ್ರಪಂಚದಿಂದ ಕಣ್ಮರೆಯಾಗುತ್ತಿದೆ. ಇಂತಹ ಇಂದಿನ ಜಗತ್ತಿಗೆ ಎಲ್ಲ ಅನಿಷ್ಟಗಳಿಂದ ಮುಕ್ತವಾಗಿಸುವ ಶಕ್ತಿ ಶರಣರ ವಚನಗಳಲ್ಲಿ ಬಿಂಬಿತವಾಗಿವೆ. ಮನುಷ್ಯನು ತನ್ನ ಸ್ವಾರ್ಥಬುದ್ಧಿಗೆ ಒಳಗಾಗಿ ಪ್ರಾಣಿಪಕ್ಷಿಗಳಿಗಿಂತ ಕೀಳಾಗಿ ಬದುಕುತ್ತಿದ್ದಾನೆಂಬುದನ್ನು ಶರಣರು ಟೀಕಿಸಿದ್ದಾರೆ. ಪರಸ್ಪರ ಸಹಕಾರ ಮನೋಭಾವನೆಯನ್ನು ಪ್ರಾಣಿಗಳಿಂದ

ಎರವಲು ಪಡೆಯಬೇಕೇ? ಎಂಬುದು ಬಸವಣ್ಣನವರ ಅಭಿಪ್ರಾಯವಾಗಿದೆ.

**ಕಾಗೆಯೊಂದಗಳ ಕಂಡರೆ**
**ಕೂಗಿ ಕರೆಯದೇ ತನ್ನ ಬಳಗವನು**
**ಕೋಳಿ ಒಂದು ಕುಟುಕ ಕಂಡಡೆ**
**ಕೂಗಿ ಕರೆಯದೆ ತನ್ನ ಕುಲವನೆಲ್ಲವ**
**ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದಡೆ**
**ಕಾಗೆ ಕೋಳಿಗಳಿಗಿಂತ ಕರಕಷ್ಟ ಕೂಡಲಸಂಗಮದೇವ**

ಕೂಡಿ ಬಾಳಿದರೆ ಸ್ವರ್ಗ ಸುಖ ಎಂಬ ಗಾದೆಯ ಶ್ರೇಷ್ಠತೆಯು ಶರಣರ ಬದುಕಿನ ಸಾರವಾಗಿದೆ. ಶರಣರೆಲ್ಲರೂ ಕೂಡಿ ೧೨ನೇ ಶತಮಾನದಲ್ಲಿ ಸರ್ವಸಮತಾವಾದ ಜಾರಿಗೆ ತಂದಿದ್ದಾರೆ. ಪರಸ್ಪರ ಪ್ರೀತಿ, ದಯೆ, ಅಂತಃಕರಣದಂತಹ ಮಾನವೀಯ ಮೌಲ್ಯಗಳನ್ನು ಹೊಂದಿ ವಿಶ್ವಬಂಧುತ್ವವನ್ನು ತೋರಿಸಿದ್ದಾರೆ.

### ೧೦) ಉತ್ತಮ ನಾಗರಿಕ ಜೀವನಕ್ಕೆ ಸಾಮಾಜಿಕ ಸಪ್ತಸೂತ್ರಗಳು

ಮನುಷ್ಯನು ಸಮಾಜದಲ್ಲಿ ಶ್ರೇಷ್ಠನಾಗಿ ಬದುಕಲು ಕಾಯ, ಮಾತು, ಮನಸ್ಸು – ಈ ಮೂರು ಶುದ್ಧವಾಗಿರಬೇಕು. ಇವುಗಳ ವಿರುದ್ಧವಾಗಿ ವರ್ತಿಸಬಾರದು. ಕೊಲೆ, ಕಳವು, ಹುಸಿ, ಅಸಹ್ಯ ಗುಣಗಳು ವ್ಯಕ್ತಿಯ ವ್ಯಕ್ತಿತ್ವಕ್ಕೆ ಧಕ್ಕೆ ತರುತ್ತವೆ. ಉತ್ತಮ ನಾಗರಿಕ ಜೀವನಕ್ಕೆ ಬಸವಣ್ಣನವರು ಬೋಧಿಸಿದ ಸಾಮಾಜಿಕ ಸಪ್ತಸೂತ್ರಗಳು ಸಾರ್ವಕಾಲಿಕವಾದವು. ಎಲ್ಲ ಕಾಲಕ್ಕೂ ಎಲ್ಲ ದೇಶಕ್ಕೂ ಒಪ್ಪುವಂತ ಚಿಂತನೆಗಳು ವಚನಗಳಲ್ಲಿ ಅಭಿವ್ಯಕ್ತಗೊಂಡಿವೆ. ಸಾಮಾಜಿಕ ಸಪ್ತಸೂತ್ರಗಳನ್ನು ತಿಳಿಸುವ ವಚನ ಹೀಗಿದೆ.

**ಕಳಬೇಡ ಕೊಲಬೇಡ ಹುಸಿಯನುಡಿಯಲುಬೇಡ**
**ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ**
**ತನ್ನ ಬಣ್ಣಿಸಬೇಡ ಇದಿರು ಹಳಿಯಲು ಬೇಡ**
**ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ**
**ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ**

ಈ ಸಪ್ತಸೂತ್ರಗಳ ವಿಸ್ತೃತ ರೂಪವು ಇಂತಿದೆ. ೧) ಕಳ್ಳತನ ಮಾಡಬೇಡ ೨) ಕೊಲೆ ಮಾಡಬೇಡ ೩) ಸುಳ್ಳು ಹೇಳಬೇಡ ೪) ಸಿಟ್ಟು ಮಾಡಬೇಡ ೫) ಇತರರ ಕಂಡು ಅಸಹ್ಯಪಟ್ಟುಕೊಳ್ಳಬೇಡ ೬) ಆತ್ಮ ಪ್ರಶಂಸೆಯಲ್ಲಿ ತೊಡಗಬೇಡ ೭) ಎದುರು ದೂಷಿಸಬೇಡ ಎಂಬ ಚಿಂತನೆಗಳು ವ್ಯಕ್ತಿಯ ಆತ್ಮೋದ್ಧಾರಕ್ಕೆ ಆತ್ಮಶುದ್ಧಿಗೆ ಸರಳವಾದ ಮಾರ್ಗಗಳು ಎಂದು ಪ್ರತಿಪಾದಿಸಿದ್ದಾರೆ.

ಬಹಿರಂಗದಲ್ಲಿ ವಿಶ್ವಮಾನವತೆ ಸಾರುವ ಧರ್ಮವಾದ ಬಸವ ಧರ್ಮವು ಅಂತರಂಗದಲ್ಲಿ ಆತ್ಮವಿಮರ್ಶೆ, ಆತ್ಮಸ್ಥೈರ್ಯ, ಆತ್ಮಸಂಯಮ, ಆತ್ಮಶುದ್ಧಿ, ಆತ್ಮಾನುಸಂಧಾನ, ಆತ್ಮಸಾಕ್ಷಿ, ಆತ್ಮವಿಶ್ವಾಸ, ಆತ್ಮನಿವೇದನೆ, ಆತ್ಮಾನಂದ, ಆತ್ಮಾವಲೋಕನ ಮತ್ತು ಆತ್ಮಸಾಕ್ಷಾತ್ಕಾರದ ಧರ್ಮವಾಗಿದೆ. ಆದ್ದರಿಂದ ಸಕಲ ಲೋಕಾನುಭವಿಗಳ ದಿವ್ಯದರ್ಶನಗಳು ಶರಣ ಸಂಸ್ಕೃತಿಯಲ್ಲಿ ಬಿಂಬಿತವಾಗಿರುವುದರಿಂದ ಬಸವಧರ್ಮ ವಿಶ್ವಮಾನ್ಯವಾಗಿದೆ. ಇಂದಿನ ಯುಗದ ನಾಗರಿಕ ಸಮಾಜಕ್ಕೂ ಶರಣರು ಆಡಿದ ಮಾತುಗಳು ದಾರಿದೀಪವಾಗಿವೆ. ಕೊನೆಯ ಮಾತು 'ಆಚಾರವೇ ಸ್ವರ್ಗ ಅನಾಚಾರವೇ ನರಕ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ.'.





# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ
'ಅನಿಮಿಷ', ಕ್ರಾಸ್–೭, ದುರ್ಗಿಗುಡಿ
ಪಂತ ೧, ಹೊನ್ನಾಳಿ – ೫೭೭ ೨೧೭
ದಾವಣಗೆರೆ ಜಿಲ್ಲೆ ೯೮೮೦೧ ೩೦೨೦೩

**ಬಂಜೆ ಬೇನೆಯನರಿವಳೆ?**
**ಬಲದಾಯಿ ಮದ್ದ ಬಲ್ಲಳೆ?**
**ನೊಂದವರ ನೋವ ನೋಯದವರೆತ್ತ ಬಲ್ಲರೊ?**
**ಚೆನ್ನಮಲ್ಲಿಕಾರ್ಜುನನಿರಿದಲಗುಒಡಲಲ್ಲಿ ಮುರಿದು ಹೊರಳುವೆನ್ನಳಲನು**
**ನೀವೆತ್ತ ಬಲ್ಲಿರೆ, ಎಲೆ ತಾಯಿಗಳಿರಾ?**

(ಶಿವಶರಣೆಯರ ವಚನಸಂಪುಟ೧೯೯೩, ಸಂ:ಡಾ.ವೀ.ರಾ, ಸ.ವ.ಸಂ.೫,ಪು.೭೩,ವ.೨೩೭)

ಬಂಜೆತನದಿಂದ ಮುಕ್ತಿಪಡೆಯಲು ಒಂಬತ್ತು ತಿಂಗಳು ಹೊತ್ತು ಅತಿಬೇನೆ ಅನುಭವಿಸಿ ಹೊಸ ಜೀವ ಹೆತ್ತು ನೋವಲ್ಲು ನಗುವಳೆ ಹೆಣ್ಣು? ತಾಯ್ತನದಲ್ಲೆ ತನ್ನ ಜೀವನದ ಸಾರ್ಥಕ್ಯ ಕಾಣುವಳೆ? ಜೀವಿಗಳನುಭವಿಸುವ ನೋವುಗಳಲ್ಲೆ ಆತ್ಯಂತಿಕ ತೀವ್ರತೆಯ ಹೆರಿಗೆ ನೋವಿಗೆ ಲೇಬರ್‌ಪೇಯ್ನ್ ಎಂಬ ಪ್ರತ್ಯೇಕ ಪಾರಿಭಾಷಿಕ ಪದ ಇಂಗ್ಲಿಷ್‌ನಲ್ಲಿದೆ.

ನಿಸರ್ಗವೇನಾದರೂ ಗಂಡಿಗು ಕಡ್ಡಾಯ ಹೆರಿಗೆ ವಿಧಿಸಿದ್ದರೆ ಆ ನೋವ ತಡೆಯಲಾರದೆ ಗಂಡು ಪ್ರಾಣವನ್ನೆ ಬಿಡುತ್ತಿತ್ತು. ಪ್ರವಾದಿ ಮೊಹಮ್ಮದ್ ಪ್ರಕಾರ ಎಷ್ಟೇ ಬಾರಿ ಯಾವ್ಯಾವತರ ಸೇವೆ ಮಾಡಿದರೂ ಹೆತ್ತತಾಯಿ ಋಣ ತೀರುವುದಿಲ್ಲವಂತೆ. ಅಣುರೂಪಿ ಮಹದ್ವಿಶ್ವದಂಥ ಹೊಸಜೀವಿಯೊಂದ ಬಸಿರಲ್ಲೆ ಸೃಷ್ಟಿಸಿ ಹೊರತರುವುದು ಸುಲಭಸಾಧ್ಯ ಮಾತೆ?

ಜೀವದ ಕುಡಿ ಹೆರಲು ತನ್ನ ಜೀವವನ್ನೆ ಸಾವಿನ ಬಾಯಲ್ಲಿಟ್ಟು ಪಣಕ್ಕೊಡ್ಡುವ ತಾಯಿಭಾವದ ಪ್ರೀತಿತ್ಯಾಗ ಕರುಣೆ ಮಮತೆ ಜೈವಿಕ ಪವಾಡಗಳಲ್ಲವೆ? ಅವಸರದ ಓದಿಗೆ ಈ ವಚನದ ಮೊದಲ ಸಾಲು ಅನ್ವಯಿಸುವುದು ಮಕ್ಕಳಾಗದ ಬಂಜೆಯರಿಗೊ, ಸ್ವತಃ ಅಕ್ಕನಿಗೊ ಎಂಬನುಮಾನ ಬಂದೀತು. ಅಕ್ಕ ದೇಹ ಶಿಶುಗಳ ಹೆರಲಿಲ್ಲ ನಿಜ. ಆದರೆ ಭಾವಪೂರ್ಣ ವಚನಗಳೆಂಬ ಆತ್ಮಶಿಶುಗಳ ಹೆತ್ತಕ್ಕ ಬಂಜೆ ಹೇಗಾದಾಳು? ಅಕ್ಕ ಪ್ರಶ್ನಿಸುತ್ತಿರುವುದು ಇತ್ತ ದೇಹಶಿಶು ಅತ್ತ ಆತ್ಮಶಿಶು ಯಾವುದನ್ನೂ ಹೆರದೆ ಬದುಕೆ ಬರಡಾದವರನ್ನು. ಅಂತವರನ್ನೂ ತಾಯಿಗಳಿರಾ ಎಂದು ಕರೆಯುವ ಔದಾರ್ಯದ ಕೊನೆಸಾಲ ಮರ್ಮವೇನು? ಕಡೆಪಕ್ಷ ತಾಯಾಗುವ ಸಾಧ್ಯತೆಯಿರುವವರೆಂತಲೆ? ತಾಯಾಗದಿದ್ದರೂ ಪರವಾಗಿಲ್ಲ ತಾಯಿ ಭಾವವನ್ನಾ –ದರೂ ರೂಢಿಸಿಕೊಳ್ಳಲೆಂತಲೆ? ಪುಟ್ಟ ಮಗಳನ್ನೂ ತಾಯೆಂದೆ ಸಂಬೋಧಿಸುವ ನಮ್ಮ ಗ್ರಾಮೀಣ ಸಂಸ್ಕೃತಿ ಅರಿವಿನ ಪರಿಪಾಠದ ಮುಂದರಿಕೆಯೆ? ಬಲದಾಯಿ ಅರ್ಥಾತ್ ಮಲತಾಯಿ

ಕುರಿತ ಎರಡನೆ ಸಾಲು ನೇರವಾದದ್ದು. ಹೇಳಿ ಕೇಳಿ ಒಂದು ಕಣ್ಣಿಗೆ ಸುಣ್ಣ ಒಂದು ಕಣ್ಣಿಗೆ ಬೆಣ್ಣೆ ಹಚ್ಚುವ ಜಾಯಮಾನದವಳು ಅವಳು. ಅವಳಿಂದ ಮಲಮಕ್ಕಳ ಆರೈಕೆಯಾದೀತೆ? ಅವರ ಕಾಯಿಲೆಗೆ ಮದ್ದು ಗೊತ್ತೆ ಅವಳಿಗೆ? ಗೊತ್ತಿದ್ದರೂ ತನ್ನ ಬಳಿಯಿದ್ದರೂ ಕೊಡುವ ಮನಸ್ಸುಳ್ಳವಳೆ? ಬಲದಾಯಿ ಮುದ್ದಬಲ್ಲಳೆ ಎಂಬ ಕಂಠಪಠ್ಯವೂ ಅಲ್ಲಲ್ಲಿ ಪ್ರಚುರವಿರುವಂತಿದೆ. ಅಂದರೆ ಮಲತಾಯಿ ಮಲಮಕ್ಕಳನ್ನ ತನ್ನ ಸ್ವಂತಮಕ್ಕಳಂತೆ ಪ್ರೀತಿಸಬಲ್ಲಳೆ? – ಎಂದರ್ಥ. ಮದ್ದ ಬಲ್ಲಳೆ, ಮುದ್ದಬಲ್ಲಳೆ ಎರಡರುತ್ತರವೂ ಇಲ್ಲ ಎಂದೇ. ಮೊದಲೆರಡು ಸಾಲಿನ ಈ ಮೊನಚು ಪ್ರಶ್ನೆಗಳು ಹೋಗಿನಾಟುವುದು ಅಕ್ಕನ್ನ ಕೊಂಕು ನೋಟ ಹ್ವಾಕೆಕತೆ ಬಿರುನುಡಿ ತಿರಸ್ಕಾರದಿಂದ ನೋಯಿಸಿದವರಿಗೇ ಹೊರತು ದೈಹಿಕ ಆತ್ಮಿಕ ಬಂಜೆಯರಿಗಲ್ಲ ಎಂಬ ಗುಟ್ಟನ್ನ ಧ್ವನ್ಯಾತ್ಮಕವಾಗಿ ಅಭಿವ್ಯಕ್ತಿಸುವ ಮೂರನೆ ಸಾಲಿಗೆ ಅಸಾಧಾರಣ ವ್ಯಾಪ್ತಿಯಿದೆ. ಮೇಲ್ನೋಟಕ್ಕೆ ಅಕ್ಕನ ದುಗುಡಭರಿತ ಬದುಕಿನ ಯಾವುದೋ ಸಂದರ್ಭಾನುಭವಕ್ಕೆ ಸೀಮಿತವಾದಂತಿರುವ ಈ ಮಾತು ಹರಳುಗಟ್ಟಿ ನುಡಿಮುತ್ತಾಗಿ ನಿಲ್ಲುವ ಛಾತಿಯದು: ನೊಂದವರ ನೋವ ನೋಯದವರೆತ್ತ ಬಲ್ಲರೊ? ಈ ಉದ್ಗಾರ ತುಂಬ ಸರಳವಾಗಿ ನಾಕೆ ಶಬ್ದಗಳಲ್ಲಿ ನಾಲಿಗೆಗೆ ಹದವಾದ ಅನುಪ್ರಾಸದ ಚೆಲುವಿನೊಡನೆ ದೇಶ ಕಾಲಾತೀತವಾದ ಅನುಭವಸತ್ಯ ಹಿಡಿದಿಟ್ಟಿದೆ. ಎಲ್ಲ ಶೋಷಿತರ ಸಂಕಟವಾಕ್ಯದಂತೆ, ಎಲ್ಲ ಹೋರಾಟಗಳ ತತ್ವಪ್ರಣಾಲಿ ಆರಂಭದಂತೆ ಭಾಸವಾಗುತ್ತೆ. ಮೇಲುಗಾರಿಕೆ ಮೆರೆದು ಶೋಷಣೆ, ದಬ್ಬಾಳಿಕೆ, ದೌರ್ಜನ್ಯ ದುಂಡಾವರ್ತಿಗೈದವರ ಕರುಳ ಕಲಕಲೆತ್ನಿಸುವ ಸಾತ್ವಿಕಾ ಕ್ರೋಶ ಇದೆ ಈ ಮಾತಿನಲ್ಲಿ. ಅಂತವರು ಸತ್ಯಕ್ಕೆ ನ್ಯಾಯಕ್ಕೆ ತಲೆಬಾಗುವಂತೆ ಮಾಡುವಷ್ಟು ಬಾಹುಬಲ ಇಲ್ಲದಿರುವ ದುಃಖಿತರ ದೀನದಲಿತರ ದುರ್ಬಲರ ಭಾವಬಲ ಸ್ಫೋಟವಿದು. ಚೆನ್ನಮಲ್ಲಿಕಾರ್ಜುನ –ಯ್ಯನಿರಿದಲಗು ಒಂದೆ ಉಸುರಿನ ಸಮಸ್ತಪದ.

ಮುಂದಿನೆರಡು ಸಾಲು ದಾಂಪತ್ಯದ ಖಾಸಗಿ ಅನುಭವನ್ನ, ಪ್ರೇಮ ಕಾಮದ ಸಂಘರ್ಷವನ್ನ ಜಗಜ್ಜಾಹೀರಾಗಿಸುವ ಮೂಲಕವೆ ಅಕ್ಕನ ಉತ್ಕಟ ಅನುಭಾವ ತೀವ್ರತೆಯನ್ನ ಮನದಟ್ಟು ಮಾಡಿಸುವಂತವು. ಒಡಲಲ್ಲಿ ಮುರಿದು ಹೊರಳುವೆನ್ನಳಲನು ಸಾಲು ವಾರಿಗೆ ಹೆಂಗೆಳೆಯರು ಮತ್ಸರಿಸುವಂತದು. ಅಕ್ಕನ ಅಳಲೆಂಥದು? ಅವಳು ಹೊರಳುತ್ತಿರುವುದು ಸುಖದಲ್ಲೊ ಸಂಕಟದಲ್ಲೊ? ಅದು ಚೆನ್ನಮಲ್ಲಿಕಾರ್ಜುನನೆ ಕರೆದಿಕ್ಕಿದ ಸುಮಧುರ ಸುಖಮಯ ಯಾತನೆ! ಮಹಾದೇವಿ ಜಾತಿಗೆಟ್ಟವಳು ಇಹದ ಗಂಡನ ಬಿಟ್ಟು ಪರದ ಗಂಡನಿಗಾಗಿ ಹಂಬಲಿಸುವವಳು ಎಂದಾಡಿಕೊಂಡು ಮೂತಿ ತಿವಿದು ಲಟಿಕೆ ಮುರಿದವರ ಕೆಟ್ಟ ಕುತೂಹಲಕ್ಕೆ ಪೂರ್ಣವಿರಾಮ ಇಟ್ಟುಬಿಡುವಂತದು. ಅವರಿಗ್ಯಾರಿಗೂ ಎಂದಿಗೂ ಸಿಕ್ಕದ ಅಲೌಕಿಕ ಸುಖ ತಾನು ಸುರಿದುಕೊಂಡಿರುವೆ, ತನಗದು ತಳಮುಟ್ಟ, ಮುಡಿಮುಟ್ಟ ದಕ್ಕಿದೆಯೆಂದು ಬಿಂಬಿಸುವ ಭಾಷಿಕ ದಿಟ್ಟತನಕ್ಕೆ ಬೆರಗಾಗದಿರುವುದು ಸಾಧ್ಯವೆ? ಕದಳಿಯ ಕರ್ಪೂರ ಕಾದಂಬರಿಯಲ್ಲಿ ಡಾ.ಎಚ್. ತಿಪ್ಪೇರುದ್ರಸ್ವಾಮಿಯವರು ಈ ವಚನ ಸಖಿಯರೊಡನೆ ಅಕ್ಕ ಸಂವಾದಿಸುವಾಗ ಮೂಡಿತೆಂದು ಸೂಚಿಸಿರುವರು. ಚೆನ್ನಮಲ್ಲಿಕಾರ್ಜುನಾ, ನೀನಿರಿದಲಗು ಒಡಲಲ್ಲಿ ಮುರಿದು\ ಹೊರಳುವವಳ ನೀವೆತ್ತ ಬಲ್ಲಿರೇ.. ಎಂಬ ಪುಟ್ಟ ಪಾಠಾಂತರವೂ ಅದರಲ್ಲಿದೆ. ಆದರೆ ಇಲ್ಲಿನ ಶಬ್ದಗಳ ಕಾವ್ಯಾತ್ಮಕ ಕಸುವು, ಅನುಭಾವಿಕ ಸೂಕ್ಷ್ಮ ಹಾಗು ಪರಿಣಾಮಿ ಇಂಗಿತ ಗಮನಿಸಿದರೆ ಇದು ಮಹಾಮನೆ ಶರಣೆಯರ ಕುರಿತ ರಚನೆ ಇರಬಾರದೇಕೆ ಎನಿಸುತ್ತದಲ್ಲವೆ? ಲೌಕಿಕ ಬಿಡುಗಡೆ ಅಲೌಕಿಕ ನಿಲುಕಡೆ ಹಂಬಲದ ಆತ್ಮ ಕೇಂದ್ರಸ್ಥಿತೆ ಅಕ್ಕ ತನ್ನಾಡಿಕೊಂಡ ಹೆಂಗೆಳೆಯರ



ಮೇಲೆ ಕಟ್ಟಿಹಾಡಿದ ಈ ವ್ಯಷ್ಟಿನೆಲೆ ವಚನದ ಬಂಜೆ ಬೇನೆಯನರಿವಳೆ?\ ಬಲದಾಯಿ ಮದ್ದ ಬಲ್ಲಳೆ?\ ನೊಂದವರ ನೋವ ನೋಯದವರೆತ್ತ ಬಲ್ಲರೊ ಸಾಲುಗಳು ತನ್ನಾತ್ಮ ವಸ್ತುವನ್ನು ಇಡಿಯಾಗಿ ಸಮಷ್ಟಿಗೇ ಸಮರ್ಪಿಸಿಕೊಂಡಿದ್ದ ಬಸವಣ್ಣಗೆ ಸಮುದಾಯೋದ್ಧಾರದ ಪ್ರತೀಕವಾಗಿ ಕಂಡು ಈ ಮಾರ್ವೊಚನ ಪ್ರಚೋದಿಸಿರಬಹುದು: ಬಂಜೆ ಬೇನೆಯನರಿಯದಂತೆ\ ಒಬ್ಬರೊಂದ ನುಡಿವಿರಿ, ಕೇಳಿರಯ್ಯಾ.\ ಎನಗೆ ಆಯುಷ್ಯ ಭವಿಷ್ಯ, ಎನ್ನ  ಭಕ್ತರು.\ ಎನ್ನ ಆಯುಷ್ಯ ಭವಿಷ್ಯ, ಎನ್ನ ಪ್ರಮಥರು ಕಂಡಯ್ಯಾ.\ ಕೂಡಲಸಂಗನ ಶರಣರು ಮುಖಲಿಂಗಿಗಳಯ್ಯಾ (ವ.೪೧೦, ಪು.೯೯, ಬಸವಣ್ಣನವರ ವಚನಸಂಪುಟ, ಸ.ವ.ಸಂ.೧, ಸಂ:ಎಂ.ಎಂ.ಕಲಬುರ್ಗಿ). ಮುಖಲಿಂಗಿ=ಮುಖವುಳ್ಳ ಲಿಂಗಸ್ವರೂಪಿಗಳು ಎನ್ನತ್ತೆ ಸಂಪುಟದ ಕಠಿಣ ಪದಕೋಶ. ಬೇರು ಮರದ ಬಾಯಾದಂತೆ, ಶರಣರ ಮುಖವೆ ಲಿಂಗ ಎಂಬುದು ಬಸವಾನುಸಂಧಾನ. ಪ್ರಮಥರು ಅರ್ಥಾತ್ ಶಿವನ ಗಣಂಗಳು ತೃಪ್ತರಾದರೆ ಬಸವಣ್ಣನ ಭಕ್ತಿ ಪರಿಪೂರ್ಣವಾದಂತೆ. ಬೈದರೆ ಬೈಸಿಕೊಂಡು ಅವರಿಗಿಕ್ಕಿ ತೃಪ್ತಿಪಡಿಸುವುದರಲ್ಲೆ ತನ್ನ ಮುಕ್ತಿಕಾಣುವ ಆತ್ಯಂತಿಕ ಭಕ್ತಿ ಅವನದು. ಅವನ ಬಿಟ್ಟು ಮತ್ಯಾರಿಗೂ ಸಾಧ್ಯವಾಗದು. ಅಂಥವನೆ ಒಂದ ನಾಡ ಹೋಗಿ ಒಂಬತ್ತನಾಡುವ ಅಧಿಕ ಪ್ರಸಂಗಿಗಳ ಮಾತು ಕೇಳಿ ತುಸು ತಾಳ್ಮೆ ತಪ್ಪಿದಂತೆ ಅಲವತ್ತಿಕೊಳ್ಳುತ್ತ ತನ್ನ ತಾನು ಸ್ಪಷ್ಟಪಡಿಸುವ ಈ ವಚನದಲ್ಲಿ ಎನ್ನ ಭಕ್ತರು ಎಂಬೆರಡು ಶಬ್ದಗಳರ್ಥ ಬಸವಭಕ್ತರು ಎಂದುಕೊಳ್ಳುವುದು ಅಪಾರ್ಥ, ಬಸವದ್ರೋಹ. ಎನ್ನ ಮತ್ತು ಭಕ್ತರು ಶಬ್ಧಗಳ ನಡುವೆ ಕೂಡಲಸಂಗನ ಎಂಬ ಶಬ್ಧ ಅಧ್ಯಾಹಾರ ಮಾಡಿಕೊಂಡು ಅಂದರೆ ಇದೆಯೆಂದು ನಂಬಿ ಸೇರಿಸಿಕೊಂಡು ಓದಬೇಕು. ವೈಯಕ್ತಿಕ ಹಿತಾಸಕ್ತಿ ಲವಲೇಶವೂ ಇಲ್ಲದ ಬಸವಣ್ಣಗೆ ಕೂಡಲಸಂಗಮದೇವನೆ ಆದ್ಯಂತ ಪರಮಾರಾಧ್ಯ ದೈವತಾನೆ? ಇವ ಮಾಡುತ್ತಿರುವ ಸಕಲವೂ ಅವನಿಗಾಗಿಯೆ ತಾನೆ? ಬಸವಣ್ಣ ತನ್ನನ್ನೆ ಜಗತ್ತಿಗೆ ತೆತ್ತುಕೊಳ್ವ ಸೆಂಟ್ರಿಫ್ಯೂಗಲ್ ವ್ಯಕ್ತಿತ್ವದವನಾದರೆ, ಅಕ್ಕ ಇಡಿ ಜಗತ್ತನ್ನೆ ತನ್ನೊಳಗೆ ಇಷ್ಟದೈವ ಮುಖೇನ ಸೆಳೆದುಕೊಳ್ವ ಸೆಂಟ್ರಿಪಿಟಲ್ ವ್ಯಕ್ತಿತ್ವದವಳು. ಅಂಥವಳ ಒಡಲಲ್ಲಿ ಮುರಿದ ಚೆನ್ನಮಲ್ಲನ ಲಗು ಅನುಭಾವ ಸುಖದಲ್ಲಿ ಓಲಾಡಿಸಿ ಆನಂದಬಾಷ್ಪ ಉಕ್ಕಿಸಿದ್ದ ಕೇಳಿ ತಾ ತಳಮುಟ್ಟ ಹೆಣ್ಣೆಂಬ ಅರಿವುಳ್ಳ ಹೆಣ್ಣುಜೀವಗಳೆಲ್ಲವೂ ಅವನಿಗಾಗಿ ಹಂಬಲಿಸಿಯಾವಲ್ಲವೆ?

●

ಭವದ ಬಟ್ಟೆಯ ದೂರವನೇನ ಹೇಳುವೆನಯ್ಯಾ
ಎಂಬತ್ತುನಾಲ್ಕು ಲಕ್ಷ ಊರಲ್ಲಿ ಎಡೆಗೆಯ್ಯಬೇಕು
ಒಂದೂರ ಭಾಷೆಯೊಂದೂರಲಿಲ್ಲ
ಒಂದೂರಲ್ಲಿ ಕೊಂಡಂಥ ಆಹಾರ ಮತ್ತೊಂದೂರಲಿಲ್ಲ
ಇಂತೀ ಊರ ಹೊಕ್ಕ ತಪ್ಪಿಂಗೆ
ಕಾಯವ ಭೂಮಿಗೆ ಸುಂಕವ ತೆತ್ತು
ಜೀವವನುಳುಹಿಕೊಂಡು ಬರಬೇಕಾಯಿತ್ತು
ಇಂತೀ ಮಹಾಘನದ ಬೆಳಕಿನೊಳಗೆ
ಕಳೆದುಳಿದು ಸುಳಿದಾಡಿ
ನಿಮ್ಮ ಪಾದವ ಕಂಡು ಸುಯಿಧಾನಿಯಾದೆ ಕಾಣಾ
ಚೆನ್ನಮಲ್ಲಿಕಾರ್ಜುನಯ್ಯಾ.

# ಅಗಣಿತ

**ಡಾ. ಅಮರೇಶ ನುಗಡೋಣಿ**
*'ಸೂರು', ಎಂ.ಪಿ. ಪ್ರಕಾಶ ನಗರ,*
*ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,*
*ಹೊಸಪೇಟೆ - ೫೮೩ ೨೦೧*
*ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೯*

**ಕಲ್ಯಾಣವೆಂಬುದಿನ್ನಾರಿಗೂ ಹೋಗಬಾರದು**
**ಅಸಾಧ್ಯವಯ್ಯ!**
**ಆಶೆ-ಆಮಿಷವನಳಿದವಂಗದೆ ಕಲ್ಯಾಣವ ಹೋಗಬಾರದು**
**ಒಳಗು-ಹೊರಗು ಶುದ್ಧವಾದಂಗಲ್ಲದೆ ಕಲ್ಯಾಣವ ಹೋಗಬಾರದು**
**ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೋಗಬಾರದು**
**ಒಳಗ ತಿಳಿದು ಚೆನ್ನಮಲ್ಲಿಕಾರ್ಜುನಂಗೊಲಿದು**
**ಉಭಯ ಲಜ್ಜೆಯನಳಿದೆನಾಗಿ ಕಲ್ಯಾಣವ ಕಂಡು**
**ನಮೋ ನಮೋ ಎನುತಿರ್ದೆನು**

**- ಅಕ್ಕಮಹಾದೇವಿ**

ವಚನ ಚಳುವಳಿಯ ಸಂದರ್ಭದಲ್ಲಿ 'ಕಲ್ಯಾಣ' ಮತ್ತು 'ಕದಳಿ' ಎಂಬೀ ಎರಡು ಪದಗಳು, ಬರೀ ಪದಗಳಾಗಿ ಉಳಿಯದೆ ರೂಪಕವಾಗಿ ಬೆಳೆದು ನಿಂತಿವೆ. ಕಲ್ಯಾಣ ಎಂಬುದು ವಚನಕಾರರ ಪಾಲಿಗೆ ಬಾಳ್ವೆಯ ಕಮ್ಮಟವಾಗಿತ್ತು. ಸಾಧಕರನ್ನು ರೂಪಿಸುವ ಕಮ್ಮಟವಾಗಿತ್ತು ಕಲ್ಯಾಣ. ಭಕ್ತಿ ಚಳುವಳಿಯ ಪ್ರಭಾವದಿಂದ ಶುರುವಾದ ವಚನ ಚಳುವಳಿಯಲ್ಲಿ ಅದೆಷ್ಟು ವಚನಕಾರರಿದ್ದರೋ ತಿಳಿಯದು. ನಾಡಿನಲ್ಲಿ, ನಾಡಿನಾಚೆ, ದೇಸಿಗರು, ದೇಸಿಗರಾಚೆ ಸಾಧಕರು ತಮ್ಮ ತಮ್ಮ ಕಾಯಕದೊಂದಿಗೆ ಸಾತ್ವಿಕರಿದ್ದರು. ವಚನ ಚಳುವಳಿಯು ಬಸವಣ್ಣನ ನೇತೃತ್ವದಲ್ಲಿ ಆರಂಭವಾದಾಗ, ಅದರಿಂದ ಹೊಸ ತತ್ವಗಳು ರೂಪಗೊಂಡಿರಬೇಕು. ಅದು ದಿನಗಳೆದಂತೆ ಹೊಸ ತತ್ವಗಳು ಪ್ರಸಾರಗೊಂಡಿರಬೇಕು. ಅಲ್ಲಲ್ಲಿ ನೆಲೆಗೊಂಡಿದ್ದ ಸಾತ್ವಿಕರು ತಮ್ಮ ಸಾಧನ ಇಚ್ಛೆಗೆ ಬಲಬಂದಿದ್ದು ಕಲ್ಯಾಣದ ಹೆಸರು ಕೇಳಿದ ಮೇಲೆ. ನಡೆ - ನುಡಿ ಒಂದಾದ ಪ್ರಾಮಾಣಿಕತೆ, ಸತ್ಯಶುದ್ಧ ಕಾಯಕ ಕೈಗೊಂಡವರು, ತಮ್ಮ ಸಾಧನೆಯನ್ನು ಬಲಪಡಿಸಿಕೊಳ್ಳಲು ಕಲ್ಯಾಣದತ್ತ ಮನಸ್ಸು ಹರಿಸುತ್ತಿದ್ದರು.

ಬಸವಣ್ಣನ ಮುಂದಾಳುತನದಲ್ಲಿ ವಚನ ಚಳುವಳಿ ನಡೆಯಿತು ಎಂಬ ಬಗ್ಗೆ ಯಾರಿಗೂ ಅನುಮಾನ ಇರಲಿಕ್ಕಿಲ್ಲ. ಬಸವಣ್ಣ ಕಲ್ಯಾಣದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿದ್ದರಿಂದ ಅಧಿಕಾರವಂತೂ ಇದ್ದೇ ಇರುತ್ತದೆ. ಪ್ರಭುತ್ವದ ರಾಜಕೀಯ ಜವಾಬ್ದಾರಿಯನ್ನು ನಿಭಾಯಿಸುವುದು ಆತನ ಮೊದಲ ಜವಾಬ್ದಾರಿ. ಎರಡನೆಯದು ವಚನ ಚಳುವಳಿಯ ಮೂಲಕ ಹೊಸ ಸಮಾಜವನ್ನು ಕಟ್ಟುವುದಾಗಿತ್ತು. ಇವೆರಡು ಬಸವಣ್ಣನಿಗೆ ಬೇರೆ ಬೇರೆಯಾಗಿ ಕಾಣಲಿಲ್ಲವೆಂದು ತೋರುತ್ತದೆ. ರಾಜ್ಯದ ಹಣಕಾಸು ಸ್ಥಿತಿಯನ್ನು ಉತ್ತಮಗೊಳಿಸಲು ಆದಾಯ ತರುವ,



ಉತ್ಪಾದಿಸುವ ಕಾಯಕ ತತ್ವವನ್ನು ಪ್ರಮುಖವಾಗಿ ಮುನ್ನೆಲೆಗೆ ತಂದಿದ್ದು ಬಸವಣ್ಣ. ಕಾಯಕತತ್ವ ಏಕಕಾಲಕ್ಕೆ ಹಲವು ಉದ್ದೇಶಗಳನ್ನು ಸಾಧಿಸಿದೆ. ಪ್ರಭುತ್ವದ ಆರ್ಥಿಕ ಭದ್ರತೆಗೆ ಕಾರಣವಾಯಿತು. ಕಾಯಕ ಜೀವಿಗಳಿಗೆ ಉದ್ಯೋಗ ಖಾತ್ರಿಯಾಯಿತು. ಕಾಯಕ ಬರೀ ಕಾಯಕವಾಗದೆ ಅದೊಂದು ತತ್ವವಾದದ್ದರಿಂದ ಅದನ್ನು ಅನುಸರಿಸುವ ಮೂಲಕ ಕಾಯಕ ಜೀವಿಗಳು ಸಾಧಕರಾದರು. ಮುಂದೆ ವಚನ ರಚಿಸಿದರು. ಶರಣರೆಂದು ಕರೆಸಿಕೊಂಡರು. ಇದು ಒಂದೆರಡು ದಿನದಲ್ಲಿ ನಡೆದಿರುವ ಪವಾಡವಲ್ಲ. ಕಲ್ಯಾಣ ಕಮ್ಮಟವಾಗಿ ಸಿದ್ಧಗೊಂಡಿತ್ತು. ಭಕ್ತಿ ಚಳುವಳಿಗೆ ಸೇರಿ, ಸಾಧಿಸಿ, ಶಿವದೀಕ್ಷೆ, ಲಿಂಗದೀಕ್ಷೆ ಪಡೆಯುವ ಸಂದರ್ಭದಲ್ಲಿ ಅದೆಷ್ಟು ಸಂಘರ್ಷವನ್ನು ಭಕ್ತ ಅನುಭವಿಸಬೇಕಾಗಿತ್ತೋ ಅದು ಶರಣರಿಗೇ ಗೊತ್ತು. ಈ ದಾರಿ ಹೋಗುತ್ತ, ಕೊಯ್ಯುವ, ಬರುತ್ತ ಕೊಯ್ಯುವಂತಿತ್ತು. ಕೊಯ್ಸಿಕೊಂಡರೆ ಮಾತ್ರ ರೂಪಗೊಳ್ಳಲು ಸಾಧ್ಯ.

ಕಲ್ಯಾಣದ ಬಗ್ಗೆ ಸಾಧಕರಲ್ಲಿ ಕುತೂಹಲಕ್ಕಿಂತ ಭಯವೇ ಜಾಸ್ತಿಯಾಗಿತ್ತು. ತಮ್ಮ ಊರುಗಳಲ್ಲಿ ಭಕ್ತಿಯ ಚಳುವಳಿಯಲ್ಲಿ ನಿರತರಾದವರು ಕಲ್ಯಾಣದಲ್ಲಿ ನಡೆಯುತ್ತಿದ್ದ ವಿದ್ಯಮಾನಗಳನ್ನು ಕೇಳಿ ಉತ್ಸಾಹಗೊಳ್ಳುವುದರ ಜತೆಗೆ ಅಲ್ಲಿಗೆ ಹೋಗಿ ನೆಲೆಸಬೇಕೆಂಬ ಬಯಕೆ ಹೋಗಿ ಧನ್ಯತೆಯನ್ನು ಪಡೆದು ಮರಳಿ ಬರುವ ಹಂಬಲ ಇನ್ನೂ ಕೆಲವರಿಗೆ. ಹಲವರಿಗೆ ಇದೆಲ್ಲಕ್ಕಿಂತ ಹೆಚ್ಚಾಗಿ ಕಲ್ಯಾಣಕ್ಕೆ ಹೋಗಲು ಬಯಸುವ ಸಾಧಕರು ದೈಹಿಕವಾಗಿ, ಮಾನಸಿಕವಾಗಿ ತಯಾರಿ ಮಾಡಿಕೊಳ್ಳುವ ಸ್ವಯಂ ನಿಯಂತ್ರಣಕ್ಕೆ ಒಳಗಾಗುತ್ತಿದ್ದರೆಂದು ಕಾಣುತ್ತದೆ. ವಚನ ಚಳುವಳಿಯ ಹೊಸ ಜೀವನ ವಿಧಾನಕ್ಕೆ ಸಂಪೂರ್ಣ ಬದ್ಧರಾಗಿಯೇ ಹೋಗುವ ನಿರ್ಧಾರ ಮಾಡಬೇಕಾಗಿತ್ತು. ಕಾಯಕ, ದಾಸೋಹ ತತ್ವ, ಲಿಂಗದೀಕ್ಷೆ - ಶಿವದೀಕ್ಷೆ ಪಡೆದು, ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ತತ್ವಗಳನ್ನು ಅಳವಡಿಸಿಕೊಂಡು ಕಲ್ಯಾಣಕ್ಕೆ ಕಾಲಿಡಬೇಕಿತ್ತು. ಸ್ವಯಂ ಪ್ರೇರಣೆಯಿಂದ, ಸ್ವಯಂ ನಿಯಂತ್ರಣದಿಂದ ಸಾಧಕ ಸಾಧಿಸಿಕೊಂಡೇ ಹೋಗಲು ಉತ್ಸುಕನಾಗುತ್ತಿದ್ದ.

ಅಕ್ಕಮಹಾದೇವಿ, ಅಲ್ಲಮಪ್ರಭು ಅವರಂಥ ಸಾಧಕರು ಯಾರಿದ್ದಾರೆ? ಅವರೇ ಕಲ್ಯಾಣದ ಬಗ್ಗೆ ಭಯ ಭಕ್ತಿಯನ್ನು ಉಳ್ಳವರಾಗಿದ್ದರು. ಆಸೆ-ಆಮಿಷ, ಒಳ-ಹೊರಗೆ ಒಂದಾದ, ಶುದ್ಧ ಮನಸ್ಸಿನ, 'ನಾನು' ಎಂಬ ಅಹಂಭಾವ ಉಳಿಸಿಕೊಳ್ಳದ ಸಾಧಕರೇ ಕಲ್ಯಾಣಕ್ಕೆ ಹೋಗಬೇಕು. ಇಲ್ಲದವರು ಕಲ್ಯಾಣಕ್ಕೆ ಹೋಗಲು ಸಾಧ್ಯವಿಲ್ಲವೆಂದು ಅಕ್ಕ ಹೇಳುತ್ತಾಳೆ. 'ಒಳಗೆ ತಿಳಿದು ಚೆನ್ನಮಲ್ಲಿಕಾರ್ಜುನಂಗೊಲಿದು ಉಭಯ ಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನು' ಅಕ್ಕನ ಈ ಮಾತನ್ನು ಕೇಳಿದರೆ ಕಲ್ಯಾಣದ ಮಹತ್ವ ಅರಿವಿಗೆ ಬರುತ್ತದೆ. ಕಲ್ಯಾಣ ಬೇರೆಯಲ್ಲ. ಕೈಲಾಸ ಬೇರೆಯಲ್ಲ. ಕೈಲಾಸ ಇದ್ದರೂ ಅದು ನಗಣ್ಯ. ಬಸವಣ್ಣನಿಗೆ ಕಲ್ಯಾಣದ ಸಾಧಕರ ಕಷ್ಟ - ಸುಖಗಳ ಅರಿವಿತ್ತು. ಸಾಧಿಸಿದ ಸಾಧಕರನ್ನು ಬಸವಣ್ಣ 'ಇಲ್ಲಿ ಸಲ್ಲುವವರು, ಅಲ್ಲಿಯೂ ಸಲ್ಲುವರು' ಎಂಬ ಮಾತನ್ನು ಹೇಳಿದ. ಸಾಧಿಸಿದ ಸಾಧಕರನ್ನು ಶರಣರೆಂದೇ ಕರೆಯಲಾಗುತ್ತಿತ್ತು. ವಚನ ಚಳುವಳಿಯಲ್ಲಿ ಸಾಧಿಸಿ ರೂಪುಗೊಂಡ ಶರಣರ ಬಗ್ಗೆ ಬಸವಣ್ಣನಿಗೆ ಎಣೆಯಿಲ್ಲದ ಅಭಿಮಾನ. ಶರಣರ ಬಗ್ಗೆ ತಿಳಿಯದೆ ಯಾರಾದರು ಕೆಡುನುಡಿಯಾಡಿದರೆ ಬಸವಣ್ಣ ಸಹಿಸುತ್ತಿರಲಿಲ್ಲ. ಶರಣರಿರುವ ಕಲ್ಯಾಣದ ಬಗ್ಗೆ ಭಯ ಮತ್ತು ಭಕ್ತಿ ಎಲ್ಲರಿಗೂ ಇತ್ತು.

'ಕಲ್ಯಾಣವೆಂಬ ಪ್ರಣತಿಯಲ್ಲಿ' ಎಂಬ ಅಲ್ಲಮನ ವಚನವು ಕಲ್ಯಾಣ ಒಂದು ಪ್ರಣತಿ, ಅದು ಬೆಳಗಲು ಬಸವಣ್ಣನೇ ಕಾರಣ ಎಂಬ ವಿಶ್ವಾಸ ಅಲ್ಲಮನದು. 'ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಕಂಡು ಬದುಕಿದೆನು' ಎನ್ನುತ್ತಾನೆ ಅಲ್ಲಮ.

ಅಲ್ಲಮ ಕಲ್ಯಾಣಕ್ಕೆ ಹೋದವನು. ಅಕ್ಕಮಹಾದೇವಿ ಹೋದವಳು. ನಾಡೊಳಗಿದ್ದ ಶರಣರೂ ಕಲ್ಯಾಣಕ್ಕೆ ಹೋಗಿ ಬಂದರು. ಗಡಿದಾಟಿ ಒಳಗೆ ಬಂದು ಕಲ್ಯಾಣದಲ್ಲಿಯೇ ನೆಲೆಸಿದವರಿದ್ದಾರೆ.

ಕಲ್ಯಾಣದ ಬಗ್ಗೆ ಭಾವನಾತ್ಮಕ ಸಂಬಂಧ ಹೊಂದಿದ ಕವಿ ಕಲಾವಿದರಿದ್ದಾರೆ. ಸಂಗೀತ ಸಾಧಕ ಶ್ರೀ ಮಲ್ಲಿಕಾರ್ಜುನ ಮನ್ಸೂರ್ ಅವರು ಮೊದಲ ಸಲ ಕಲ್ಯಾಣಕ್ಕೆ ಕಾರಿನಲ್ಲಿ ಹೋದರಂತೆ. 'ಕಲ್ಯಾಣ ಬಂತು ಇಳಿಯಿರಿ' ಎಂದು ಎಚ್ಚರಿಸಿದಾಗ, ಮನ್ಸೂರರು ಕಾರಿನಿಂದ ಇಳಿವಾಗ, ತಮ್ಮ ಪಾದವನ್ನು ಹೊರಗಿಟ್ಟು ಕಲ್ಯಾಣವನ್ನು ತುಳಿಯಲಿಲ್ಲವಂತೆ. ಕಾರಿನಲ್ಲಿಯೇ ಇದ್ದು ತಲೆಯನ್ನು ಹೊರ ಚಾಚಿ, ತಮ್ಮ ಹಣೆಯನ್ನು ನೆಲಕ್ಕೆ ಮುಟ್ಟಿಸಿ, ಧನ್ಯತೆ ಹೊಂದಿ 'ಶರಣರು ಓಡಾಡಿದ ಕಲ್ಯಾಣವಿದು. ಅವರೆಲ್ಲರಿಗೆ ಶರಣು' ಎಂದರಂತೆ. ಮುಗ್ಧತೆಯೂ ಭಕ್ತಿಯೇ ಅಲ್ಲವೆ?

●

## ಶರಣು ಶರಣು

ಎಲ್ಲ ಹಸಿರ ಉಸಿರನೆಲ್ಲ
ಹೊತ್ತು ತಂದು
ನಮ್ಮ ಜೀವದುಸಿರಾಗಿಸುವ
ಗಾಳಿ ತಂಗಾಳಿಗೆ
ಶರಣು ಶರಣು

ಎಲ್ಲ ಹನಿಗಳು ಸೇರಿ
ನದಿಗಳಾಗಿ ಹರಿದು ಬಂದು
ನಮಗೆ ನೀರುಣಿಸುವ
ಜೀವ ಜಲಕ್ಕೆ
ಶರಣು ಶರಣು

ಎಲ್ಲ ಕಲ್ಲುಗಳೊಳಗಡಗಿರುವ
ಒಡಲ ಜೀವಜ್ಯೋತಿಯು
ನೂರು ರೂಪಗಳ ತಾಳಿ
ಶಾಖ ಬೆಂಕಿಯಾಗಿ
ನಮ್ಮ ಹಸಿವ ನೀಗಿಸುವ
ಬೆಳಕಿಗೆ ಶರಣು ಶರಣು

ಎಲ್ಲ ಬಿತ್ತನೆಗಳಿಗೂ
ತನ್ನ ಅಪ್ಪುಗೆಯಲ್ಲಿ ಅಂಕುರಗೊಳಿಸಿ
ಒಡಲುಗಳ ತುಂಬುವ
ಭೂಮಿತಾಯಿಗೆ
ಶರಣು ಶರಣು

ಎಲ್ಲ ನಕ್ಷತ್ರಗಳ ಹೊಳಪು
ಸೂರ್ಯ ಚಂದಿರರ ಬೆಳಕು
ಮೋಡ ಮಳೆ ತುಂತುರು ಹನಿಗಳ
ತಂಪು ಆನಂದವನ್ನು ನೀಡುವ
ಅನಂತ ಆಕಾಶಕ್ಕೆ, ಬಯಲಿಗೆ
ಶರಣು ಶರಣು

**ರಾಣಿ ನಾಗರತ್ನ**
*EWS- ೨೪೮, ೧ನೆ ಅಡ್ಡರಸ್ತೆ*
*೧ನೆ ಹಂತ, ಕುವೆಂಪು ನಗರ*
*ಮೈಸೂರು – ೫೭೦ ೦೨೩*
*೯೭೩೯೫ ೫೬೭೨೮*





# ಭಕ್ತಿ

**ಡಾ. ಓ.ಎಲ್. ನಾಗಭೂಷಣಸ್ವಾಮಿ**
*ನಂ.೪೪೫, ಆನಂದ ನಿಲಯ, ೮ನೆಯ*
*ಮೇನ್, ಸರಸ್ವತಿಪುರಂ,*
*ಮೈಸೂರು – ೫೭೦ ೦೦೯*
*ಮೊ: ೯೪೮೦೩ ೭೯೮೩೭*

ನಾವು ಬಹಳ ಸಲೀಸಾಗಿ ಬಳಸುವ, ಆದರೆ ಬಳಸುವ ಮಾತಿನ ಅರ್ಥ, ಭಾವಗಳು ತಿಳಿಯದ ಪದಗಳು ಬಹಳ ಇವೆ. ಪದಗಳನ್ನು ಬಳಸುತ್ತೇವಾದರೂ ಪದ ಅರ್ಥ ಅಥವಾ ಪದಾರ್ಥ ನಮಗೆ ಗೊತ್ತಿರುವುದಿಲ್ಲ. ಪ್ರೀತಿ ಅಂಥದೊಂದು ಪದ, ಭಕ್ತಿ ಇನ್ನೊಂದು ಪದ. ವಚನಕಾರರಲ್ಲಿ ಬಸವಣ್ಣನವರು ಭಕ್ತಿ ಅನ್ನುವುದರ ಅರ್ಥದ ವಿಸ್ತಾರ ಎಷ್ಟು ಅನ್ನುವುದನ್ನು ಅವರ ಸುಮಾರು ೧೭೦ ವಚನಗಳಲ್ಲಿ ವಿವರಿಸಲು ಪ್ರಯತ್ನಪಟ್ಟಿದ್ದಾರೆ. ಭಕ್ತಿಯ ಬಗ್ಗೆ ವಿದ್ವಾಂಸರು, ಸಂಸ್ಕೃತ ಶ್ಲೋಕಗಳು ಹೇಳುವುದನ್ನು ಕೇಳಿ ದಣಿಯುವುದಕ್ಕಿಂತ ಬಸವಣ್ಣನವರ ಮಾತು ನಮ್ಮ ಮನಸಿನಲ್ಲಿ ಹೊಕ್ಕಾಡುವುದಕ್ಕೆ ಅವಕಾಶ ಕೊಡುವುದು ಒಳ್ಳೆಯ ಕೆಲಸ.

ಭಕ್ತಿಯೆನ್ನುವುದು ಕೇವಲ ಮನಸಿನ ಭಾವ ಮಾತ್ರವಲ್ಲ, ದೇಹದ ಜೊತೆಗೂ ಅಷ್ಟೇ ನಿಕಟವಾಗಿ ಸಂಬಂಧಪಟ್ಟದ್ದು. ಮನಸುಗಳೆರಡು ಬೆರೆತ ಸ್ಥಿತಿ ಭಕ್ತಿ. ಹಾಗೆ ಮನಸುಗಳು ಬೆರೆತಾಗ ಮೈ ಕರಗಿ ಹೋಗಬೇಕು. ಇನ್ನೊಂದು ಮೈ, ಇನ್ನೊಂದು ಮನಸು ಸೋಂಕುತಿದ್ದ ಹಾಗೇ ನಮ್ಮ ಮೈಯಲ್ಲಿ ಪುಳಕ ಹೊಮ್ಮ ಬೇಕು. ಬಯಸುತಿದ್ದ ಆ ಇನ್ನೊಂದು ಜೀವ ಕಂಡ ತಕ್ಷಣ ಕಣ್ಣಲ್ಲಿ ಕಂಬನಿ ಸುರಿಯಬೇಕು. ಮಾತು ಹೊರಡದೆ ಗದ್ಗದಗಳಷ್ಟೆ ಹೊರಡಬೇಕು. ಹೀಗೆಲ್ಲ ನಮ್ಮ ಮೈಯಲ್ಲಿ ಲಕ್ಷಣಗಳು ಕಾಣದಿದ್ದರೆ ಭಕ್ತಿ ಇದೆ ಅಂದರೆ ಏನರ್ಥ? ಮನಸಿನ ಭಾವಕ್ಕೆ ದೇಹವೇ ಸಾಕ್ಷಿ. ನನ್ನಲ್ಲಿ ಇವು ಯಾವುವೂ ಇಲ್ಲವಾಗಿ ನಾನು ಬರಿಯ ಮೋಸಗಾರ ಎಂದು ಬಸವಣ್ಣನವರು ಹೇಳಿರುವುದನ್ನು ಈ ವಚನದಲ್ಲಿ ನೋಡಿ:

**ಮನ ಮನ ಬೆರಸಿದಲ್ಲಿ ತನು ಕರಗದಿದ್ದಡೆ/ ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದಡೆ/ ಕಂಡಾಗಳಶ್ರುಜಲಂಗಳು ಸುರಿಯದಿದ್ದಡೆ/**

**ನುಡಿವಲ್ಲಿ ಗದ್ಗದಂಗಳು ಪೊಣ್ಮದಿದ್ದಡೆ/ ಕೂಡಲಸಂಗಮದೇವರ ಭಕ್ತಿಗಿದು ಚಿಹ್ನ/ಎನ್ನಲ್ಲಿ ಇವಿಲ್ಲಾಗಿ ಆನು ಡಂಬಕ ಕಾಣಿರೇ (೧.೩೭೯)**

ಸ್ವಲ್ಪ ಸಾವಧಾನವಾಗಿ ನೋಡಿದರೆ ಕೆಲವು ಸಂಗತಿಗಳು ಹೊಳೆಯುತ್ತವೆ. ಮನಸಿನ ಭಾವಗಳು ಅಸಂಖ್ಯವಾಗಿರಬಹುದು. ಆ ಭಾವಗಳು ದೇಹದಲ್ಲಿ ವ್ಯಕ್ತವಾಗುವ ಬಗೆಗಳು ಮಾತ್ರ ಪರಿಮಿತವೇ ಆಗಿವೆ. ಈ ವಚನದಲ್ಲಿ ಬಸವಣ್ಣನವರು ಭಕ್ತಿಯು ದೇಹದ ಮೂಲಕ ಹೇಗೆ ವ್ಯಕ್ತವಾಗುತ್ತದೆ ಎಂದು ಹೇಳಿದ್ದಾರೋ ಅವೆಲ್ಲ ಲಕ್ಷಣಗಳೂ ಪ್ರೀತಿಯ ರೀತಿಗೂ

ಅನ್ವಯವಾಗುತ್ತವಲ್ಲವೇ? ಪ್ರತಿಯೊಬ್ಬರೂ ಬದುಕಿನಲ್ಲಿ ಒಮ್ಮೆಯಾದರೂ ತಾವು ಪ್ರೀತಿಸುವ ವ್ಯಕ್ತಿಯನ್ನು ಕಂಡಾಗ, ಇಬ್ಬರ ಮನಸು ಬೆರೆತಾಗ ದೇಹಗಳು ಒಮ್ಮೆಯಾದರೂ ಇಂಥ ಪ್ರತಿಕ್ರಿಯೆ ತೋರಿರುತ್ತವೆ. ಹಾಗೆ ಮತ್ತೊಂದು ಜೀವದೊಡನೆ ಬೆರೆಯಬೇಕೆನ್ನುವ ಪ್ರೀತಿ ಬೇರೆಯಲ್ಲ, ದೇವರೊಡನೆ ಬೆರೆಯಬೇಕೆಂಬ ಭಕ್ತಿಯೂ ಬೇರೆಯಲ್ಲ. ಅದೇ ಕಾರಣಕ್ಕೆ ಅಕ್ಕಮಹಾದೇವಿ ಪ್ರೀತಿಯ, ಶೃಂಗಾರದ ಮಾತು ಬಳಸಿ ತನ್ನ ಭಕ್ತಿಯನ್ನು ಹೇಳಿಕೊಂಡಿದ್ದಾರೆ. ಮೀರಾಬಾಯಿಯವರು ರಾಧಾ ಕೃಷ್ಣರ ಪ್ರೀತಿಯ ವರ್ಣನೆಯನ್ನು ಭಕ್ತಿಯ ವರ್ಣನೆಯಾಗಿ ಪರಿವರ್ತಿಸುತ್ತಾರೆ. ಶೃಂಗಾರವೂ ಭಕ್ತಿಯೂ ಭಕ್ತಿ ಅನ್ನುವುದು ದೇಹದ ನಿರಾಕರಣೆಯಲ್ಲ, ದೇಹದ ಮೂಲಕವೇ ಅರಿವಿಗೆ ಬರುವ ಭಾವ. ಪ್ರೀತಿಯ ಹಾಗೇ ಭಕ್ತಿಗೂ ನಾಚಿಕೆ, ಭಯ ಎರಡೂ ಇರುವುದಿಲ್ಲವೆಂದೇ ಕಾಣುತ್ತದೆ. ಅದಕ್ಕೇ ಶಿಶುನಾಳ ಶರೀಫರೂ, ಮಹದೇವಿಯಕ್ಕ -ನವರೂ ತೀವ್ರವಾದ ಭಕ್ತಿಯನ್ನು ಹಾದರವೆಂದೂ ವರ್ಣಿಸಿದ್ದಾರೆ ಅನಿಸುತ್ತದೆ. ಪ್ರೀತಿ, ಭಕ್ತಿ ಎರಡೂ ಎಂಥ ತೀವ್ರವಾದ ಭಾವಗಳೆಂದರೆ ಅವು ಮಿಕ್ಕ ಯಾವ ಭಾವಕ್ಕೂ ಆಲೋಚನೆಗೂ ತರ್ಕಕ್ಕೂ ಅವಕಾಶವನ್ನೇ ಕೊಡುವುದಿಲ್ಲ. ಉರಿಯುವ ಬೆಂಕಿಂಥ ಭಾವಗಳು.

ದುರಂತವೆಂದರೆ ಪ್ರೀತಿಗೂ, ಭಕ್ತಿಗೂ ಯಾಂತ್ರಿಕವಾಗುವ ದೊಡ್ಡ ಅಪಾಯ ಇದ್ದೇ ಇದೆ. ಯಾಂತ್ರಿಕವೆಂದರೆ ಗೊತ್ತಲ್ಲವೇ? ಯಾವ ಭಾವಗಳೂ ಪ್ರತಿಕ್ರಿಯೆಗಳೂ ಇಲ್ಲದ ಹಾಗೆ, ಯಂತ್ರದ ಥರ ಒಂದೇ ಕೆಲಸವನ್ನು ಸುಮ್ಮನೆ ಮಾಡುತ್ತಲೇ ಹೋಗುವುದೇ ಯಾಂತ್ರಿಕತೆ. ಬಸವಣ್ಣನವರ ಈ ವಚನವನ್ನು ನೋಡಿ: ಅಭ್ಯಾಸವೆನ್ನವರ್ತಿಸಿತ್ತಯ್ಯಾ ಭಕ್ತಿ ಸಾಧ್ಯವಾಗದು/ ನಾನೇವೆನಯ್ಯಾ/ ಆನು ನಿಮ್ಮ ಮನಂಬೊಗುವನ್ನಕ್ಕ/ ನೀವೆನ್ನಮನಂಬೊಗುವನ್ನಕ್ಕ/ ಕಾಯಗುಣಂಗಳ ಕಳೆದವರಿಗೆ ಶರಣೆಂಬೆ/ ಕೂಡಲಸಂಗಮದೇವಾ (೧.೫೧೧). ನನ್ನ ವರ್ತನೆ, ಬದುಕಿನ ರೀತಿ ಅಭ್ಯಾಸವಾಗಿಬಿಟ್ಟಿದೆ. (ಅಭ್ಯಾಸವಾಗುವುದೆಂದರೆ ಹೊಸತೇನೂ ಇಲ್ಲದೆ ಮಾಡಿದ್ದನ್ನೇ ಮತ್ತೆ ಮತ್ತೆ ರಿಪೀಟು ಮಾಡುವ ಕೆಲಸ). ನೀವು ನನ್ನ ಮನಸ್ಸನ್ನು ನಾನು ನಿಮ್ಮ ಮನಸ್ಸನ್ನು ಹೋಗುವವರೆಗೆ ತಾಳಲಾರೆ ನಾನು. (ನಾನಲ್ಲದ ಅನ್ಯ ಮನುಷ್ಯ ಜೀವಿಯಾದರೆ ಪ್ರೀತಿ, ದೇವರಾದರೆ ಭಕ್ತಿ ಅನ್ನುವ ತೀರ್ಮಾನ ಇರಬಹುದೇ?) ಪರಸ್ಪರರ ಮನಸುಗಳು ಬೆರೆತ ಮೇಲೆ ದೇಹ ಇದ್ದರೂ ಇರದಿದ್ದರೂ ಒಂದೇ. ಹಾಗಾಗಿ ಕಾಯದ ಗುಣವನ್ನು ಕಳೆದುಕೊಂಡವರಿಗೆ, ಮನ-ಮನ ಬೆರೆತವರಿಗೆ ಶರಣು ಎನ್ನುತ್ತದೆ ಈ ವಚನ. ಹಿಂದಿನ ವಚನದ ಜೊತೆಗೆ ಇರಿಸಿ ನೋಡಿದರೆ ಒಂದು ಅಂಶ ಸ್ಪಷ್ಟವಾಗುತ್ತದೆ. ಮನಸು ದೇಹಕ್ಕಿಂತ ಮಿಗಿಲೇ ಇರಬಹುದು, ದೈವಭಕ್ತಿ ಮಾನುಷ ಪ್ರೀತಿಗಿಂತ ದೊಡ್ಡದೇ ಇರಬಹುದು, ಆದರೆ ಅದು ಇದೆ ಅನ್ನುವುದು ನನಗೂ ಬೇರೆಯವರಿಗೂ ಗೊತ್ತಾಗುವುದೇ ನಮ್ಮ ದೇಹದ ಮೂಲಕ. ಸನಾತನ ಧರ್ಮಗಳು ದೇಹಕ್ಕಿಂತ ಆತ್ಮ ಮುಖ್ಯವೆಂದು ವಾದಿಸುತ್ತಿದ್ದ ಹೊತ್ತಿನಲ್ಲಿ ಕಾಯಕ್ಕೆ ಪ್ರಾಮುಖ್ಯ ನೀಡಿದ್ದು, ಭಕ್ತಿಗೂ ಕಾಯಕ್ಕೂ ಇರುವ ಸಂಬಂಧ ಎತ್ತಿ ಹಿಡಿದದ್ದು ಕ್ರಾಂತಿಕಾರಕವಾದ ಬದಲಾವಣೆಯೇ ಸರಿ.

ಇಷ್ಟು ಮಾತ್ರವಲ್ಲ, ಭಕ್ತಿಗೆ ಸಮಾಜ ಮುಖವೂ ಇದೆ. ಜಾತಿಗಳು ದೇಹಕ್ಕೆ, ಮುಟ್ಟಬಾರದವರು, ಮುಟ್ಟಿಸಿಕೊಳ್ಳಬೇಕಾದವರು ಅನ್ನುವುದೆಲ್ಲ ದೇಹಕ್ಕೆ ಸಂಬಂಧಪಟ್ಟ ಕಟ್ಟಳೆಗಳು. ಸನಾತನ ಧರ್ಮ ಆತ್ಮವನ್ನು ಎಷ್ಟೇ ಪ್ರಧಾನವೆಂದರೂ ದೇಹ ಮತ್ತು ದೇಹದ ಜೊತೆಗೇ ಅಂಟಿ ಬರುವ ಜಾತಿಗೆ ಅತಿ ಹೆಚ್ಚಿನ ಪ್ರಾಮುಖ್ಯ ನೀಡಿದ್ದು ನಿಜ. ಅಂಥ ಜಾತಿಯನ್ನು ನಿರಾಕರಿಸುವ ದಾರಿಯನ್ನು ಭಕ್ತಿಯೇ ತೋರಿತು. ಭಕ್ತಿಯ ಈ ಕ್ರಾಂತಿಕಾರಕ ಗುಣ ತಮಿಳು



ನಾಡಿನ ಭಕ್ತರ ಕಥೆಗಳಲ್ಲೇ ಮೊದಲು ಕಾಣುತ್ತದೆ. ಗಂಡು, ಹೆಣ್ಣು, ಜಾತಿಗಳ ಹಂಗಿಲ್ಲದೆ ಭಕ್ತರೆಲ್ಲರೂ ಸಮಾನರು ಅನ್ನುವ ಧೋರಣೆ ಭಕ್ತಿಯದು.

ಬಸವಣ್ಣನವರ ಈ ವಚನವನ್ನು ನೋಡಿ: ಭಕ್ತಿಯಿಲ್ಲದ ಬಡವ ನಾನಯ್ಯಾ/ಕಕ್ಕಯ್ಯನ ಮನೆಯಲ್ಲೂ ಬೇಡಿದೆ/ಚೆನ್ನಯ್ಯನ ಮನೆಯಲ್ಲೂ ಬೇಡಿದೆ/ದಾಸಯ್ಯನ ಮನೆಯಲ್ಲೂ ಬೇಡಿದೆ/ ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದಡೆ/ ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ (೧.೩೫೦). ಈ ಲೇಖನದ ಮೊದಲಲ್ಲಿ ಉದ್ಧರಿಸಿದ ವಚನದಲ್ಲಿ ನಾನು ಭಕ್ತಿ ಡಂಬಕ ಎಂಬ ಮಾತಿದ್ದರೆ ಇಲ್ಲಿ, ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ, ಇಂಥ 'ಕೆಳಗಿನ' ಜಾತಿಗಳೆಂದು ತಪ್ಪಾಗಿ ಕರೆಯುವ ಜನರು ನೀಡಿದ ಭಕ್ತಿಭಿಕ್ಷದಿಂದ ನನ್ನ ಪಾತ್ರ ತುಂಬಿತು ಎಂಬ ಮಾತು ಗಮನಿಸಬೇಕಾದದ್ದು.

ಅಹಂಕಾರವಿದ್ದರೆ ಪ್ರೀತಿಯೂ ಇರುವುದಿಲ್ಲ, ಭಕ್ತಿಯೂ ಇರುವುದಿಲ್ಲ. ಇವೆರಡೂ ಭಾವಗಳು ನೂರಕ್ಕೆ ನೂರರಷ್ಟು ನಮ್ಮನ್ನು ಆವರಿಸಿದರೆ ಮಾತ್ರ ಬದುಕು ನಿಜವಾಗುತ್ತದೆ. ಸ್ಪರ್ಧೆ, ಹಣದ ಆಸೆ, ಅಂತಸ್ತಿನ ಅಪೇಕ್ಷೆ, ಖ್ಯಾತಿಯ ಬಯಕೆ ಇಂಥವು ಯಾವುದೇ ಆಗಲಿ ಕಿಂಚಿತ್ ಇದ್ದರೂ ಪ್ರೀತಿ, ಭಕ್ತಿ ಎರಡೂ ಅಸಾಧ್ಯ. ಬಸವಣ್ಣನವರು ತಮ್ಮ ಭಕ್ತಿಯ ಮೂಲಕ ಜಾತಿಯ ಮೇಲು-ಕೀಳುಗಳನ್ನು ಮೀರುವ ಬಗೆಯನ್ನು ಈ ವಚನದಲ್ಲಿ ತೋರಿಸಿಕೊಟ್ಟಿದ್ದಾರೆ. ದೇಹಕ್ಕೆ ಅಂಟಿಕೊಂಡೇ ಇರುವ ಜಾತಿಯನ್ನು ಮನ ಮನ ಬೆರೆತ ಭಕ್ತಿ ಅಥವ ಪ್ರೀತಿ ಮಾತ್ರ ನಾಶಮಾಡಬಲ್ಲದು ಅನ್ನುವುದಕ್ಕೆ ಬಸವ ವಚನಗಳಲ್ಲೇ ಹೇರಳವಾಗಿ ನಿದರ್ಶನ ದೊರೆಯುತ್ತವೆ.

ಸದ್ಯಕ್ಕೆ ಈ ಮೂರು ವಚನಗಳು ಹೇಳುವ ಸಂಗತಿ ಇದು: ಭಕ್ತಿ ಅಥವ ಪ್ರೀತಿ ಕೇವಲ ಯಾಂತ್ರಿಕ ಅಭ್ಯಾಸವಲ್ಲ, ಪ್ರತಿ ದಿನದ ಪ್ರತಿ ಕ್ಷಣದ ಕೂಟ, ನಮ್ಮನ್ನು ನಾವು ಸದಾ ಜೀವಂತವಾಗಿಟ್ಟಿಕೊಳ್ಳುವುದಕ್ಕೆ ಇರುವ ಏಕೈಕ ಸಾಧ್ಯತೆ. ಅದು ದೇಹವನ್ನೂ ಮನಸ್ಸನ್ನೂ ಒಂದುಗೂಡಿಸಿ ಬದುಕಲು ಇರುವ ದಾರಿ. ಮನ ಮನ ಬೆರೆತಾಗ ದೇಹಗಳಿಗೆ ಅಂಟಿರುವ ಜಾತಿಯ ಹಿರಿಮೆ ಗರಿಮೆ ಇಲ್ಲವಾಗುತ್ತವೆ. ಅಹಂಕಾರ ನೀಗಿಕೊಂಡು ಪ್ರೀತಿ, ಭಕ್ತಿ ಸಾಧ್ಯವಾಗುತ್ತದೆ.

ಜಾತಿ ವಿನಾಶದ ಮಾತನ್ನು ಬಹಳ ಜನ ಆಡುವುದು ಕೇಳಿದ್ದೇವೆ. ಬಸವಣ್ಣನವರಂತೆ ನಮ್ಮನ್ನು ನಾವು ನಮಗಿಂತ 'ಕೆಳಗಿನದು' ಎಂದು ಭಾವಿಸಿಕೊಂಡ ಜಾತಿಗೆ ಸೇರಿದವರು ಎಂದು ಹೇಳಿಕೊಳ್ಳುವ ಮನಸ್ಥಿತಿ, ಧೈರ್ಯಗಳು ಬಾರದಿದ್ದರೆ ಬಸವ ಆರಾಧನೆಯಿಂದ ಯಾವ ಸಾಮಾಜಿಕ ಪ್ರಯೋಜನವೂ ಆಗದು. ಇಂಥ ಭಕ್ತಿಯ ಮಿಕ್ಕ ಗುಣಗಳನ್ನು ಮುಂದಿನ ಲೇಖನದಲ್ಲಿ ನೋಡೋಣ.

ಗುರುವಿಂಗೆ ಗುರುವಿಲ್ಲ
ಲಿಂಗಕ್ಕೆ ಲಿಂಗವಿಲ್ಲ
ಜಂಗಮಕ್ಕೆ ಜಂಗಮವಿಲ್ಲ
ನನಗೆ ನಾನಿಲ್ಲ
ಕಣ್ದೆರೆದು ನೋಡುವಡೆ
ಆರಿಗೆ ಆರೂ ಇಲ್ಲ
ಕಪಿಲಸಿದ್ಧಮಲ್ಲಿಕಾರ್ಜುನ.

## ಒಂದು ವಚನ ~ ಎರಡು ನೋಟ

ಶ್ರೀ ಸಿ.ಪಿ. ನಾಗರಾಜ ಅವರು ನಿವೃತ್ತ ಕನ್ನಡ ಪ್ರಾಧ್ಯಾಪಕರು. ಭಾಷಾ ವಿಜ್ಞಾನ, ನುಡಿಗಟ್ಟುಗಳು, ವಿಮರ್ಶೆ ಇವರ ಮುಖ್ಯ ಆಸಕ್ತಿಯ ಕ್ಷೇತ್ರಗಳು. ವಚನ ಸಾಹಿತ್ಯದಲ್ಲಿ ಅಪಾರವಾದ ಆಸಕ್ತಿ ಮತ್ತು ಪಾಂಡಿತ್ಯ ಇವರದು.

ಡಾ.ಕೆ.ಎಸ್. ಶಾಲಿನಿ ಅವರು ಮಹಾರಾಣಿ ವಿಜ್ಞಾನ ಕಾಲೇಜಿನಲ್ಲಿ ರಸಾಯನಶಾಸ್ತ್ರದ ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸಾಹಿತ್ಯ ಇವರ ಪ್ರೀತಿಯ ಕ್ಷೇತ್ರವಾಗಿದೆ. ಮಹಿಳಾ ಸಾಹಿತ್ಯ ಮತ್ತು ವಿಮರ್ಶೆಯಲ್ಲಿ ಇವರಿಗೆ ಒಲವು.

ಹಾವಾಡಿಗನು ಮೂಕೊರತಿಯು
ತನ್ನ ಕೈಯಲ್ಲಿ ಹಾವು
ಮಗನ ಮದುವೆಗೆ
ಶಕುನವ ನೋಡ ಹೋಹಾಗ
ಇದಿರಲೊಬ್ಬ ಮೂಕೊರತಿಯ ಹಾವಾಡಿಗನ ಕಂಡು
ಶಕುನ ಹೊಲ್ಲೆಂಬ ಚದುರನ ನೋಡಾ
ತನ್ನ ಸತಿ ಮೂಕೊರತಿ
ತನ್ನ ಕೈಯಲ್ಲಿ ಹಾವು
ತಾನು ಮೂಕೊರೆಯು
ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯನೇನೆಂಬೆ ಕೂಡಲಸಂಗಮದೇವಾ.

ಬಸವಣ್ಣ

## ಬದುಕಿನ ಅಸಂಗತತೆಯ ಚಿತ್ರಣ

ಸಿ.ಪಿ. ನಾಗರಾಜ

ನಂ. ೭೫, 'ಎ' ಬ್ಲಾಕ್, ೫ನೆ ಅಡ್ಡರಸ್ತೆ
ಕೃಷ್ಣ ಗಾರ್ಡನ್, ಆರ್.ವಿ. ಕಾಲೇಜ್ ಪೋಸ್ಟ್,
ಬೆಂಗಳೂರು - ೫೬೦ ೦೫೯
೯೯೮೬೩ ೪೭೫೨೧

ಈ ವಚನವನ್ನು ಎರಡು ನೆಲೆಗಳಲ್ಲಿ ವಿವರಿಸಿಕೊಳ್ಳಬಹುದು. (೧) ತನ್ನಲ್ಲಿರುವ ಅರೆಕೊರೆಗಳನ್ನು ತಾನು ಅರಿತುಕೊಳ್ಳದೆ, ಇತರರ ಅರೆಕೊರೆಗಳನ್ನು ಎತ್ತಿ ಆಡುವ ವ್ಯಕ್ತಿಯ ಇಬ್ಬಂದಿತನವನ್ನು ಈ ವಚನದಲ್ಲಿ ಹೇಳಲಾಗಿದೆ. ಇಬ್ಬಂದಿತನ ಎಂದರೆ ತನಗೆ ಒಂದು ನೀತಿ



ಬೇರೆಯವರಿಗೆ ಮತ್ತೊಂದು ನೀತಿ ಎಂಬ ನಿಲುವನ್ನು ಹೊಂದಿರುವುದು. (೨) ತಲೆತಲಾಂತರಗಳಿಂದಲೂ ಜನಸಮುದಾಯದ ಮನದಲ್ಲಿ ನೆಲೆಗೊಂಡಿರುವ ಶಕುನಗಳನ್ನು ನಂಬಿಕೊಂಡು ಬಾಳುತ್ತಿರುವ ವ್ಯಕ್ತಿಯ ತಿಳಿಗೇಡಿತನದ ವರ್ತನೆಯನ್ನು ಈ ವಚನದಲ್ಲಿ ಹೇಳಲಾಗಿದೆ.

ತನ್ನ ಭಿನ್ನವನರಿಯದೆ ಅನ್ಯರನೆಂಬ ಕುನ್ನಿಯನೇನೆಂಬೆ ಕೂಡಲ ಸಂಗಮದೇವಾ. ಹಾವಾಡಿಗನು ತನ್ನಂತೆ ಮತ್ತು ತನ್ನ ಹೆಂಡತಿಯಂತೆಯೇ ಇರುವ ಮತ್ತೊಂದು ಜೋಡಿಯನ್ನು ಕಂಡು ಅಪಶಕುನವಾಯಿತೆಂಬ ಆತಂಕಕ್ಕೆ ಒಳಪಟ್ಟಿದ್ದಾನೆ. ಇದು ಆತನ ತಿಳಿಗೇಡಿತನವನ್ನು ಸೂಚಿಸುವುದು ಮಾತ್ರವಲ್ಲ, ಒಂದು ಸಮಾಜದ ನಡಾವಳಿಯು ಇಲ್ಲವೇ ಜನಸಮುದಾಯದ ನಂಬಿಕೆಯು ಹೇಗೆ ಕೋಟೆಗಟ್ಟಲೆ ಜನಮನದಲ್ಲಿ ಕೀಳರಿಮೆಯನ್ನು ನಾಟುವಂತೆ ಮಾಡಿ, ವ್ಯಕ್ತಿಗಳ ಬದುಕನ್ನು ಹಲವಾರು ಬಗೆಯ ಯಾತನೆಗೆ ಗುರಿಮಾಡುತ್ತದೆ ಎಂಬುದನ್ನು ತಿಳಿಸುತ್ತದೆ. ಈ ಪ್ರಸಂಗದಲ್ಲಿ ಹಾವಾಡಿಗನ ನಂಬಿಕೆಯಿಂದಾಗಿ ನಡೆಯಬೇಕಾಗಿದ್ದ ಮಗನ ಮದುವೆಯು ಮುರಿದುಬಿದ್ದಿತು. ಶಿವಶರಣಶರಣೆಯರು ಎಲ್ಲಾ ಬಗೆಯ ಶಕುನಗಳನ್ನು ತಿರಸ್ಕರಿಸಿದ್ದರು ಮತ್ತು ಜೀವನದ ಆಗುಹೋಗುಗಳಿಗೆ/ಒಳಿತು ಕೆಡುಕುಗಳಿಗೆ ವ್ಯಕ್ತಿಗಳ ನಡೆನುಡಿಗಳೇ ಕಾರಣ ಎಂಬ ನಿಲುವನ್ನು ಹೊಂದಿದ್ದರು ಎಂಬುದನ್ನು ಈ ವಚನ ತಿಳಿಸುತ್ತದೆ. ಕಾರಣಗಳ ನಂಟನ್ನು ಅರಿಯದೆ, ಹಿಂದಿನಿಂದಲೂ ಕೇಳಿಕೊಂಡು ಬಂದಿರುವ ಮಾತುಗಳಲ್ಲಿರುವ ಸರಿ / ತಪ್ಪನ್ನು ಇಲ್ಲವೇ ನಿಜ/ಸುಳ್ಳನ್ನು ಒರೆಹಚ್ಚಿ ನೋಡದಿರುವುದರಿಂದ ಜನರು ಈ ರೀತಿ ತಿಳಿಗೇಡಿತನದಿಂದ ನಡೆದುಕೊಳ್ಳುತ್ತಿದ್ದಾರೆ.

ಈ ಪ್ರಸಂಗದಲ್ಲಿ ಎದುರಿಗೆ ಬಂದ ಹಾವಾಡಿಗ ಮತ್ತು ಮೂಕೊರತಿಯನ್ನು ಅಪಶಕುನದ ಸಂಕೇತಗಳೆಂದು ನಂಬಲಾಗಿದೆ. ಹಾವಾಡಿಗನು ಹಾವನ್ನಾಡಿಸುವ ಕಸುಬಿನ ಮೂಲಕ ತನ್ನ ಜೀವನವನ್ನು ರೂಪಿಸಿಕೊಂಡಿರುವ ವ್ಯಕ್ತಿ. ಆತನ ಕೈಯಲ್ಲಿರುವ ಹಾವನ್ನು ನಾಗದೇವತೆಯೆಂದು ಜನಸಮುದಾಯವು ಪೂಜಿಸುತ್ತದೆ. ಮೂಕೊರತಿಯ ಮೂಗಿನ ಆಕಾರವು ಆಕೆಯು ಹುಟ್ಟಿನಿಂದಲೇ ಬಂದಿರುಬಹುದು ಇಲ್ಲವೇ, ಆಕೆಯ ಜೀವನದಲ್ಲಿ ನಡೆದ ಅವಘಡದಿಂದ ಮೂಗಿಗೆ ದೊಡ್ಡ ಪೆಟ್ಟು ಬಿದ್ದು ಅಪ್ಪಚ್ಚಿಯಾಗಿರಬಹುದು. ವಾಸ್ತವದ ಸಂಗತಿಗಳು ಹೀಗಿರುವಾಗ, ಹಾವಾಡಿಗ ಮತ್ತು ಮೂಕೊರತಿಯನ್ನು ಅಪಶಕುನವೆಂದು ಜನಸಮುದಾಯವು ನಂಬಿರುವುದಕ್ಕೆ ಕಾರಣವನ್ನು ತಿಳಿಯಬೇಕಾದರೆ ನಮ್ಮ ಸಮಾಜದ ರಚನೆಯನ್ನು ನೋಡಬೇಕಾಗುತ್ತದೆ.

ನಮ್ಮ ಸಮಾಜವು ಮೇಲು/ಕೀಳಿನ ಮೆಟ್ಟಿಲುಗಳಿಂದ ಕೂಡಿರುವ ಜಾತಿ ತಾರತಮ್ಯದಿಂದ ಕೂಡಿದೆ. ಈ ಜಾತಿ ತಾರತಮ್ಯವು ಪ್ರತಿಯೊಬ್ಬ ವ್ಯಕ್ತಿಯ ಮನದಲ್ಲಿಯೂ "ನಾನು ಇನ್ನೊಬ್ಬನಿಗಿಂತ ಮೇಲು ಎಂಬ ಇಲ್ಲವೇ ಕೀಳು" ಎಂಬ ಮೇಲರಿಮೆ/ ಕೀಳರಿಮೆಯ ಒಳಮಿಡಿತವನ್ನು ಯಾವಾಗಲೂ ಮೂಡಿಸುತ್ತಿರುತ್ತದೆ. ಇದೇ ರೀತಿಯಲ್ಲಿ ಕಸುಬುಗಳಲ್ಲಿಯೂ ಕೆಲವನ್ನು ಒಳ್ಳೆಯದು/ಉತ್ತಮವೆಂದು, ಮತ್ತೆ ಕೆಲವನ್ನು ಕೆಟ್ಟದ್ದು/ಹೊಲಸು ಎಂಬ ನಿಲುವನ್ನು ಹೊಂದಲಾಗಿದೆ. ಜನಸಮುದಾಯವು ಹಾವಾಡಿಗನ ಜಾತಿಯನ್ನು ಮತ್ತು ಕಸುಬನ್ನು ಕೀಳು ಎಂದು ಪರಿಗಣಿಸಿರುವುದರಿಂದ ಅವನು ಅಪಶಕುನದ ಸಂಕೇತವಾಗಿದ್ದಾನೆ.

ವ್ಯಕ್ತಿಯ ದೇಹದ ಆಕಾರದಲ್ಲಿ ಕಂಡುಬರುವ ಅರೆಕೊರೆಗಳಿಗೆ ಹಿಂದಿನ ಜನ್ಮದ ಪಾಪ-ಪುಣ್ಯಗಳು ಕಾರಣವೆಂಬ ನಂಬಿಕೆಯು ಜನಮನದಲ್ಲಿದೆ. ಆದ್ದರಿಂದ ಮೂಕೊರತಿಯು ಅಪಶಕುನದ ಸಂಕೇತವಾಗಿದ್ದಾಳೆ. ಸಮಾಜದಲ್ಲಿನ ಈ ಬಗೆಯ ನಂಬಿಕೆಗಳ ನೆಲೆಯಲ್ಲಿ ಬೆಳೆದು ಬಂದಿರುವ ಹಾವಾಡಿಗನ ವರ್ತನೆಯು ತನ್ನ ಬಗ್ಗೆ ತಾನು ಹೊಂದಿರುವ ಕೀಳರಿಮೆ

ಮಾತ್ರವಲ್ಲದೆ, ತಿಳಿಗೇಡಿತನದಿಂದ ಕೂಡಿದೆ. ಜಾತಿಯ ಮೇಲು/ಕೀಳು, ಪುನರ್ಜನ್ಮ ಮತ್ತು 'ಕರ್ಮಸಿದ್ಧಾಂತ'ಗಳು ಜನಮನದಲ್ಲಿ ಇಂತಹ ನೂರಾರು ಬಗೆಯ ಕೀಳರಿಮೆಯನ್ನು ನೆಲೆಗೊಳಿಸಿರುವುದನ್ನು ಈ ಬಗೆಯ ಪ್ರಸಂಗದಲ್ಲಿ ಕಾಣಬಹುದು.

# ಸಂಬಂಧಗಳ ವಿಲಕ್ಷಣತೆ


## ಡಾ. ಕೆ.ಎಸ್. ಶಾಲಿನಿ

ಸಂಪದ, ೧೮೪೬, ೩೫ನೆ ಮುಖ್ಯರಸ್ತೆ
ನಾಗರಭಾವಿ ೨ನೆ ಹಂತ,
ಬೆಂಗಳೂರು- ೯೧
೭೦೨೨೫ ೪೫೫೧೦


ಕೈಯಲ್ಲಿ ಹಾವು ಹಿಡಿದು ತನ್ನ ಮಡದಿಯೊಂದಿಗೆ ಮಗನಿಗೆ ಹೆಣ್ಣು ನೋಡಲು ಹೊರಟ ಹಾವಾಡಿಗ ಎದುರಿಂದ ಬರುವ ಮೂಕೊರತಿಯನ್ನೂ, ಅವಳ ಹಾವಾಡಿಗನನ್ನು ಕಂಡು ಶಕುನ ಸರಿಬರಲಿಲ್ಲ ಎಂದು ಜರಿಯುವ ಚತುರತೆಯನ್ನು ಈ ವಚನದಲ್ಲಿ ಬಸವಣ್ಣನವರು ವಿಮರ್ಶೆಗೊಳಪಡಿಸುತ್ತಿದ್ದಾರೆ ಹಾಗೂ ತನ್ನನ್ನು ತಾನು ಅರಿಯದೇ, ಇತರರನ್ನು ಜರಿಯುವ, ಬೇರೆಯವರ ಗುಣಾವಗುಣಗಳನ್ನು ಪರಾಮರ್ಶಿಸಲು ತೊಡಗುವವರನ್ನು ಏನೆನ್ನಬೇಕೆಂದು ಅಚ್ಚರಿವ್ಯಕ್ತಪಡಿಸುತ್ತಾರೆ.

ವಿಮರ್ಶೆ ಮಾನವನ ಸಹಜ ಗುಣ. ಯಾವುದೇ ವ್ಯಕ್ತಿ ಅಥವಾ ಘಟನೆಯ ಬಗ್ಗೆ ಉದ್ದೇಶಪೂರ್ವಕವಾಗಿಯೋ, ಅಲ್ಲವೋ ವಿಮರ್ಶೆ ಮಾಡುವುದು ನಮ್ಮ ಸ್ವಭಾವದಲ್ಲಿಯೇ ರೂಢಿಗತವಾಗಿದೆ. ಆದರೆ ಇತರ ಸಂಗತಿಗಳ ಬಗ್ಗೆ ಕೂಲಂಕುಷವಾಗಿ ಚಿತ್ರಿಸುವ ನಾವು ನಮ್ಮ ಒಳಗನ್ನು ಅಥವಾ ಸ್ವಭಾವವನ್ನು ವಿಮರ್ಶಿಸಿಕೊಳ್ಳಲು ಆಸಕ್ತಿ ತೋರುವುದಿಲ್ಲ. ಅದರಲ್ಲೂ ಕೆಲವೊಮ್ಮೆ ಸಹ ನಮ್ಮ ತಪ್ಪು-ಒಪ್ಪುಗಳ ಬಗ್ಗೆ ಜಾಣಗುರುಡನ್ನು ರೂಢಿಸಿಕೊಂಡಿರುತ್ತೇವೆ. ಈ ಜಾಣಗುರುಡು ನಮ್ಮ ಬಗ್ಗೆಯಷ್ಟೇ ಅಲ್ಲದೆ, ನಾವು ನಮ್ಮವರು ಎಂದು ಪರಿಗಣಿಸುವ ಎಲ್ಲರನ್ನೂ ಒಳಗೊಳ್ಳುತ್ತದೆ.

ಬಹಿರಂಗ ಶುದ್ಧಿಯಷ್ಟೇ ಅಥವಾ ಅದಕ್ಕಿಂತ ಹೆಚ್ಚು ಅಂತರಂಗ ಶುದ್ಧಿಗೆ ಮಹತ್ವ ನೀಡುವ ಬಸವಣ್ಣನವರು, ನಾವು ಮತ್ತು ನಮ್ಮವರೆಲ್ಲರ ಉದ್ಧಾರಕ್ಕೆ ಸ್ವವಿಮರ್ಶೆ ಎಷ್ಟು ಮುಖ್ಯ ಎಂಬುದನ್ನು ಈ ವಚನದ ಮೂಲಕ ಸಾರಿ ಹೇಳುತ್ತಿದ್ದಾರೆ.

ಇಂದಿನ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಗೆ ಈ ಆತ್ಮವಿಮರ್ಶೆಯ ಲೋಪವೇ ಪ್ರಮುಖ ಕಾರಣವಾಗಿದೆ ಎಂದರೆ ಬಹುಶಃ ತಪ್ಪಾಗಲಾರದೇನೋ. ಪ್ರತಿಯೊಬ್ಬರೂ ಇತರರನ್ನು ವಿಮರ್ಶಿಸುವ ಮೊದಲು ತಮ್ಮ, ತಮ್ಮವರ ಕುರಿತು ಆತ್ಮ ವಿಮರ್ಶೆ ಮಾಡಿಕೊಂಡಿದ್ದೇ ಆದಲ್ಲಿ ನಮ್ಮ ಸಮಾಜದ ಚಿತ್ತ-ಸ್ವಾಸ್ಥ್ಯ ಅತ್ಯುತ್ತಮವಾಗುತ್ತದೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಬಸವಣ್ಣನವರ ಈ ವಚನವನ್ನು ಹೃದ್ಗತ ಮಾಡಿಕೊಂಡು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದುದು ಇಂದಿನ ದಿನದಲ್ಲಿ ಅತ್ಯಗತ್ಯ-ಅನಿವಾರ್ಯ.



# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ


## ಡಾ. ಅಮರೇಶ ನುಗಡೋಣಿ

'ಸೂರು', ಎಂ.ಪಿ. ಪ್ರಕಾಶ ನಗರ,
ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,
ಹೊಸಪೇಟೆ – ೫೮೩ ೨೦೧
ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೭೯೪೫೯


**ಡಾ. ಅಮರೇಶ ನುಗಡೋಣಿ ಅವರು ಕನ್ನಡದ ಪ್ರಮುಖ ಕಥೆಗಾರರು. ಕನ್ನಡ ಕಥಾ ಸಾಹಿತ್ಯಕ್ಕೆ ಹೊಸ ಆಯಾಮವನ್ನು ತಂದುಕೊಟ್ಟ ಹೆಗ್ಗಳಿಕೆ ಇವರದು. ಇವರ ಕೆಲವು ಕಥೆಗಳು ಯಶಸ್ವಿ ಚಲನಚಿತ್ರಗಳಾಗಿ ಪ್ರಶಸ್ತಿಗಳನ್ನು ಪಡೆದಿವೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಇವರು ಕಾರ್ಯನಿರ್ವಹಿಸುತ್ತಿದ್ದಾರೆ. "ಮಣ್ಣು ಸೇರಿತು ಬೀಜ", "ತಮಂಧದ ಕೇಡು" ಇದು ಇವರ ಕಥಾಸಂಕಲನಗಳು.**

**೧. ಶರಣರ ಸಮುದಾಯದ ಪರಿಕಲ್ಪನೆ ಯಾವುದು? ಅದಕ್ಕೊಂದು ಸಮಗ್ರತೆ ಇದೆಯೆ?**

**ಉತ್ತರ:** ಭಾರತದಾದ್ಯಂತ ಭಕ್ತಿ ಚಳುವಳಿ ೫-೬ನೇ ಶತಮಾನದಿಂದ ಹುಟ್ಟಿ ಬೆಳೆಯುತ್ತ ಬಂತು. ಬೇರೆ ಬೇರೆ ರಾಜ್ಯಗಳಲ್ಲಿ ಅದಕ್ಕೆ ಬೇರೆ ಬೇರೆ ಹೆಸರುಗಳಿವೆ. ವೈದಿಕ ವಿರೋಧಿ ನಿಲುವನ್ನಿಟ್ಟುಕೊಂಡು ಬೆಳೆದವು. ಮಹಾರಾಷ್ಟ್ರ, ತಮಿಳುನಾಡು, ಕರ್ನಾಟಕ, ಪಂಜಾಬ, ಅಸ್ಸಾಂಗಳಲ್ಲಿ ಬೆಳೆದು ನಿಂತ ಭಕ್ತಿ ಚಳುವಳಿಯಲ್ಲಿ ಪಾಲ್ಗೊಂಡು ತಮ್ಮನ್ನು ಅರ್ಪಿಸಿಕೊಂಡ ಆಯಾ ರಾಜ್ಯಗಳಲ್ಲಿನ ಭಕ್ತರ ಸಮುದಾಯಗಳಿಗೆ ಬೇರೆ ಬೇರೆ ಹೆಸರುಗಳಿವೆ. ಕರ್ನಾಟಕದಲ್ಲಿ ಬೆಳೆದ ಭಕ್ತಿ ಚಳುವಳಿ ಸೇರಿ ಬಲಪಡಿಸಿದ ಸಮುದಾಯಕ್ಕೆ ಶರಣ ಸಮುದಾಯ ಎಂದು ಕರೆಯಲಾಗಿದೆ. ಭಕ್ತಿಯ ಸ್ವರೂಪವನ್ನು ಅರಿತು ನಡೆದವರಿಗೆಲ್ಲ ಶರಣರು ಎಂದು ಗುರುತಿಸಿಕೊಂಡರು. ಈ ಸಮುದಾಯದಲ್ಲಿ ವಚನಗಳನ್ನು ಬರೆದವರಿಗೆ ವಚನಕಾರರು ಎಂದು ಕರೆಯಲಾಗುತ್ತಿದೆ. ಎಲ್ಲ ಶರಣರು ವಚನಕಾರರಲ್ಲ. ಹಾಗೆಯೇ ವಚನಕಾರರನ್ನೆಲ್ಲ ಶರಣರು ಎಂದು ಕರೆಯುವುದು ಕಷ್ಟ. ಯಾರನ್ನು ನಿಖರವಾಗಿ ಶರಣರು ಎಂದು ಗುರುತಿಸುವುದು ಕಷ್ಟ. ವಚನ ರಚನಕಾರರನ್ನು ವಚನಕಾರ ಎಂದು ಕರೆಯಬಹುದು. ಅಲ್ಲಮ, ಬಸವ, ಅಕ್ಕ, ಸಿದ್ಧರಾಮ, ಮುಕ್ತಾಯಕ್ಕ ಮುಂತಾದ ಸಾಧಕರನ್ನು ಶರಣರು ಮತ್ತು ವಚನಕಾರರು ಎಂದು ಗುರುತಿಸುತ್ತೇವೆ. 'ಕೋಟಿಗೊಬ್ಬ ಶರಣ' ಎಂಬ ಮಾತಿದೆ. ಈ ಪದವಿ ದೊಡ್ಡದೆಂದು ಕಾಣುತ್ತದೆ. ಹನ್ನೆರಡನೆಯ ಶತಮಾನದ ನಂತರ ಸಾಧಕರನ್ನು ಅನುಭಾವಿ, ಅವಧೂತ, ಆರೂಢ, ಸಂತ ಮುಂತಾದ ಪದಗಳಲ್ಲಿ ಗುರುತಿಸಲಾಗುತ್ತಿದೆ.

**೨. ಲಿಂಗನ್ಯಾಯದ ಪರಿಕಲ್ಪನೆ ಶರಣರಲ್ಲಿ ಸ್ವಚ್ಛವಾಗಿ ಬೇರೂರಿತ್ತು ಎಂದು ನಿಮಗನಿಸುತ್ತಿದೆಯೆ?**

**ಉತ್ತರ:** ಪುರುಷ ಮತ್ತು ಸ್ತ್ರೀ ಈ ಎರಡು ಜೀವಗಳಲ್ಲಿ ಸಾಮಾಜಿಕವಾಗಿ ತರತಮ ಭಾವನೆಯಿತ್ತು. ಇದನ್ನು ಅರಿತು ಸ್ತ್ರೀಗೆ ಆದ್ಯತೆ ನೀಡಿದರು ಎಂಬುದರಲ್ಲಿ ಅನುಮಾನವಿಲ್ಲ. ಈ ಆದ್ಯತೆ ಪುರುಷ ಸಮುದಾಯದಲ್ಲಿ ನೆಲೆಗೊಂಡಿತ್ತು ಎಂಬುದರ ಬಗ್ಗೆ ಅನುಮಾನವಿದೆ. ಎಲ್ಲ ಪುರುಷರು 'ಶರಣ'ರಾಗಿದ್ದರೆ ಪರಿಪೂರ್ಣತೆ ಸಾಧಿಸಬಹುದಿತ್ತು. ತಾತ್ವಿಕವಾಗಿ ಲಿಂಗನ್ಯಾಯ ಅಂಗೀಕಾರವಾಗಿರಬಹುದು. ಕ್ರಿಯೆಯಲ್ಲಿ ನೆಲೆಗೊಂಡಿರಲಿಲ್ಲವೆಂದು ಮಹಿಳೆಯರು ರಚಿಸಿದ ವಚನಗಳಿಂದ ತಿಳಿಯುತ್ತದೆ.

**೩. ವಚನಕಾರ್ತಿಯರ ಹೋರಾಟಕ್ಕೆ ಪ್ರತ್ಯೇಕ ಅಸ್ತಿತ್ವ ಇದೆಯೇ?**

**ಉತ್ತರ:** ಆಯ್ದಕ್ಕಿ ಲಕ್ಕಮ್ಮನ ವಚನಗಳನ್ನು ಗ್ರಹಿಸಿದರೆ ಪ್ರತ್ಯೇಕ ಅಸ್ತಿತ್ವ ಇತ್ತೆಂದು ಕಾಣುತ್ತದೆ. ಹಾಗೆಯೇ ಮುಕ್ತಾಯಕ್ಕನ ಬಗ್ಗೆ ಹೇಳಬಹುದು. ವಚನಕಾರ್ತಿಯರು ತಕ್ಕಮಟ್ಟಿನ ಅಸ್ತಿತ್ವ ಪಡೆದಿದ್ದರು. ಆದರೆ ಅದೊಂದು ಪ್ರವಾಹವಾಗಿ ಹರಿಯುವ ಅವಕಾಶ ಚರಿತ್ರೆಯಲ್ಲಿ ಸೃಷ್ಟಿಯಾಗಲಿಲ್ಲ. ರಾಜಪ್ರಭುತ್ವ, ಧರ್ಮಪ್ರಭುತ್ವಗಳು ಬಲವಾದ ಬೇರುಗಳೊಂದಿಗೆ ನಿಂತಿದ್ದ ಕಾಲದಲ್ಲಿ ಸ್ತ್ರೀಗಿದ್ದ ನಿಷೇಧಗಳನ್ನು ಸಡಿಲಿಸಿದ ಭಕ್ತಿ ಚಳುವಳಿಯಲ್ಲಿ, ತಮ್ಮ ಅಸ್ತಿತ್ವ ಕಟ್ಟಿಕೊಳ್ಳುವ ಶಕ್ತಿಯನ್ನು ಪ್ರದರ್ಶಿಸಿದ ಉದಾಹರಣೆಗಳಾಗಿ ವಚನಕಾರ್ತಿಯರನ್ನು ನೋಡಬೇಕು. ಸ್ತ್ರೀಗೆ ಅಸ್ತಿತ್ವ ಇಪ್ಪತ್ತೊಂದನೆಯ ಶತಮಾನದಲ್ಲಿ ಕಷ್ಟವಾಗಿದೆಯಲ್ಲ? ಇನ್ನು ಆ ಶತಮಾನದ ಕಥನ..?

**೪. ಸಹಿಷ್ಣುತೆಯನ್ನು ಶರಣ ಚಳುವಳಿಯ ಆಶಯ ಎಂದು ಹೇಳಲು ಸಾಧ್ಯವಿದೆಯೇ?**

**ಉತ್ತರ:** ಬಸವಣ್ಣನ ವಚನಗಳಲ್ಲಿ ಅದಿದೆ. ಇತರರಲ್ಲಿ ಅದಿಲ್ಲ ಎಂದು ಹೇಳಲಾಗದು. 'ಇವನಾರವ?' ಎಂಬುದು ಸಮಾಜದಲ್ಲಿರುವ ಸ್ಥಾಯಿಭಾವ. ಇದನ್ನು ಒಡೆದು ಹಾಕಲು 'ಇವ ನಮ್ಮವ' ಎನ್ನುವ ಭಾವಕ್ಕೆ ಪರಿವರ್ತಿಸಲು ಶರಣ – ವಚನ ಚಳುವಳಿ ದುಡಿಯಿತು. ಲಿಂಗಸಮಾನತೆ, ಜಾತಿಸಮಾನತೆ, ವೃತ್ತಿಸಮಾನತೆಗಳನ್ನು ನೆಲೆಗೊಳಿಸುವ ಪ್ರಯತ್ನಗಳು ಶರಣ ಚಳುವಳಿಯಲ್ಲಿ ನಡೆದವು ಎಂಬುದೇ ಸಮಾಧಾನದ ವಿಷಯ. ನೆಲೆಗೊಳ್ಳಲಿಲ್ಲ ಎಂಬುದು ಅಷ್ಟೇ ಸತ್ಯ. ಇಪ್ಪತ್ತೊಂದನೆಯ ಶತಮಾನದಲ್ಲಿ ಜಾತಿಪ್ರಭುತ್ವಗಳು ಗಟ್ಟಿಯಾದ ನೆಲೆಯನ್ನು ಪಡೆಯುತ್ತಿರುವುದನ್ನು ಗಮನಿಸಿದರೆ ಈ ನೆಲದಲ್ಲಿ ಶರಣ ವಚನ ಸಮುದಾಯ ವೊಂದು ಬಾಳಿತ್ತು ಎಂಬುವ ನೆನಪನ್ನೇ ಮರೆತಂತೆ ಕಾಣುತ್ತದೆ.

**೫. ಹೊಸಗನ್ನಡ ಬಂಡಾಯ ದಲಿತ ಘಟ್ಟಗಳು ವಚನಕ್ರಾಂತಿಯ ಮರು ಆವೃತ್ತಿ ಎನ್ನಬಹುದೇ?**

**ಉತ್ತರ:** ಜನಸಮುದಾಯಗಳ ಸಮಗ್ರ ಏಳಿಗೆಯ ಆಶಯಗಳು ವಚನ–ಶರಣ ಕ್ರಾಂತಿಯಲ್ಲಿತ್ತು ಎಂದು ಹೇಳಬಹುದು. ಬಂಡಾಯ ಸಾಹಿತ್ಯ ಚಳುವಳಿಗೆ ವಚನಕ್ರಾಂತಿಯ ಪ್ರೇರಣೆಯೂ ಇತ್ತು. ಬಸವ, ಕನಕ, ಕುವೆಂಪು, ಲೋಹಿಯಾ ಅವರ ವಿಚಾರಗಳ ಪ್ರಭಾವವೂ ಇತ್ತು. ದಲಿತ ಸಾಹಿತ್ಯ ಚಳುವಳಿಗೆ ಬಸವಣ್ಣನ ದಲಿತ ಕಾಳಜಿ ಶಕ್ತಿಯನ್ನು ನೀಡಿತ್ತು. ಡಾ. ಅಂಬೇಡ್ಕರ್ ಪ್ರಭಾವವೇ ಹೆಚ್ಚು. 'ದಲಿತ'ವೂ 'ಜಾತಿ'ಯಾಗಿ ಪರಿವರ್ತನೆಯಾಯಿತು. ವಚನಕಾಲದ ದಲಿತ ಪ್ರಜ್ಞೆ ಬೇರೆಯೆಂದು ಕಾಣುತ್ತದೆ. ದಲಿತ ಒಂದು ಸಮುದಾಯವಾಗಿ ಬೆಳೆದಿದ್ದರೆ ಫಲಿತ ಬೇರೆಯಾಗುತ್ತಿತ್ತೇನೋ?



**೬. ವಚನಕಾರರು ನಡೆಸಿದ ಜಾತಿ–ವಿನಾಶ ಕುರಿತಂತೆ ನಿಮ್ಮ ಅನಿಸಿಕೆಗಳೇನು?**

**ಉತ್ತರ:** ಜಾತಿನಾಶದ ಪ್ರಯತ್ನಗಳು ಬಲವಾಗಿಯೇ ವಚನಕ್ರಾಂತಿಯ ಕಾಲದಲ್ಲಿ ನಡೆದವು ಎಂಬ ಬಗ್ಗೆ ನನಗೆ ಅನುಮಾನವಿಲ್ಲ. ಜಾತಿನಾಶದ ಪ್ರಯತ್ನದ ಫಲವಾಗಿಯೇ ಲಿಂಗಸಮಾನತೆ, ವೃತ್ತಿ ಸಮಾನತೆಗಳು ಮುಖ್ಯ ಕಾಳಜಿಯಾದವು. ಅಂತರ್ಜಾತಿ ಮದುವೆ ಪ್ರಯತ್ನ ನಡೆಯಿತು ಎಂಬುದನ್ನು ಗಮನಿಸಿದರೂ ಜಾತಿನಾಶದ ಯತ್ನವಿತ್ತು. ಆದರೆ ಅದು ಸಾಧ್ಯವಾಗಲಿಲ್ಲ ಎಂಬ ಹತಾಶೆ ವಚನಗಳಲ್ಲಿ ವ್ಯಕ್ತವಾಗಿದೆ. ಅಂದಿನ ಅಂತರ್ಜಾತಿ ವಿವಾಹಕ್ಕೆ ಒದಗಿದ ಗತಿ ಇಂದೂ ಮುಂದುವರಿದಿದೆ. 'ಮರ್ಯಾದಹತ್ಯೆ' ಇದನ್ನೇ ಸೂಚಿಸುತ್ತದೆ. ಸಹಜ ಮನುಷ್ಯ ನಿಜ ಮನುಷ್ಯ ಜಾತಿಯನ್ನು ಬೆಂಬಲಿಸುವುದಿಲ್ಲ.

**೭. ವಚನ ಚಳುವಳಿಯಲ್ಲಿ ನಿರ್ಣಾಯಕ ಎಂದು ಭಾವಿಸುವ ಘಟನೆ ಯಾವುದು?**

**ಉತ್ತರ:** ಈ ಪ್ರಶ್ನೆ ನನಗೆ ಸರಿಯಾಗಿ ತಿಳಿಯುತ್ತಿಲ್ಲ. ತಿಳಿದುಕೊಂಡಂತೆ ಹೇಳುವುದಾದರೆ, 'ಮನುಷ್ಯ ಸಮುದಾಯ' ಎಂಬುದು ಒಂದೇ. ಮನುಷ್ಯ ಸಮುದಾಯಗಳು ಇರಬಾರದು ಎಂಬ ಹೋರಾಟ ವ್ಯರ್ಥವೆಂದು ವಚನಕ್ರಾಂತಿಯಿಂದ ಬೆಳೆಯುತ್ತದೆ. ಆದರೆ ಈ ವ್ಯರ್ಥ ಪ್ರಯತ್ನವನ್ನು ಮಹಾಪುರುಷರು ಮಾಡುತ್ತಲೇ ಇದ್ದಾರೆ. ಮಾಡುವುದು ಅವರ ಆಧ್ಯಾತ್ಮ. ಸಮಾಜ ತನ್ನ ಕೇಡಿನಿಂದ ಮುಕ್ತಿ ಹೊಂದುವುದಿಲ್ಲ.

ಬಸವ ಶರಣರು ಯಾವುದರ ವಿರುದ್ಧ ಹೋರಾಡಿದರೋ ಆ ವಾತಾವರಣ ಇಂದು ಢಾಳಾಗಿ ಬೆಳೆದು ನಿಂತಿದೆ. ಇರಲಿ, ಶರಣರು ಸೃಷ್ಟಿಸಿದ ಕನ್ನಡ ಜಗತ್ತೇ ನಿರ್ಣಾಯಕ.

**೮. ವಚನ ಚಳುವಳಿಯು ಜಂಗಮದಿಂದ ಸ್ಥಾವರದ ಜಡತ್ವಕ್ಕೆ ಬಂದಿದೆ ಎಂದು ನಿಮಗೆ ಅನಿಸುತ್ತದೆಯೆ?**

**ಉತ್ತರ:** ಯಾವುದೇ ಚಳುವಳಿಗೆ ಬಲವಾದ ಒಂದು ಕನಸು ಇರುತ್ತದೆ. ಕನಸಿರದಿದ್ದರೆ ಚಳುವಳಿ ಹುಟ್ಟುವುದಾದರೂ ಹೇಗೆ? ವಚನ ಚಳುವಳಿಗೆ ನೆಲದ ಬದುಕನ್ನು ಜಂಗಮತ್ವಕ್ಕೆ ಪರಿವರ್ತಿಸಬೇಕು ಎಂಬ ಕನಸಿತ್ತು. ಜಂಗಮತ್ವವಿತ್ತು. ಅದು ಈಗಿಲ್ಲ ಎಂಬ ಭಾವನೆ ವಚನ ಚಳುವಳಿಗೆ ಇರಲಿಲ್ಲ. ಜಂಗಮತ್ವವಿಲ್ಲ. ಅದು ಇದ್ದರೆ ಸಕಲ ಜೀವರಾಶಿಗೆ ಲೇಸು ಎಂದು ಭಾವಿಸಿ ಜಂಗಮ ಜಗತ್ತನ್ನು ಕಟ್ಟಲು ಪ್ರಯತ್ನಿಸಿತು. ಜಡತ್ವವೇ ಸದಾ ಜೀವಂತವಾಗಿರುತ್ತದೆ. ಜಡತ್ವದ ಒಡಲಲ್ಲಿ ಜಂಗಮತ್ವ ಚಿಗುರಲಿ ಎಂದೇ ವಚನ ಚಳುವಳಿ ಯತ್ನಿಸಿದಷ್ಟೇ ಅದು ಅದರ ಕನಸಾಗಿತ್ತು.

**೯. ವರ್ತಮಾನದ ಭಾಷಾ ಸವಾಲುಗಳ ಹಿನ್ನೆಲೆಯಲ್ಲಿ ಶರಣರು ಕಟ್ಟಿದ ಕನ್ನಡದ ಬಗೆಗೆ ನಿಮ್ಮ ನಿಲುವು?**

**ಉತ್ತರ:** ಅಕ್ಷರ ವಿದ್ಯೆ ಪ್ರಮಾಣವಲ್ಲ ಎಂಬ ಸತ್ಯ ವಚನಕಾರರ ಕಣ್ಣಮುಂದಿತ್ತು. ಅದಕ್ಕಾಗಿಯೇ ಅನುಭವ–ಅನುಭಾವವೇ ಪ್ರಮಾಣ ಎಂಬ ಸತ್ಯದ ಬೆನ್ನತ್ತಿದರು. ತಾವು ನಿಂತ ನೆಲದಲ್ಲಿ ಕನ್ನಡ ನುಡಿಯಿತ್ತು. ಅದನ್ನೇ ಉಸಿರಾಡಲು ಛಲತೊಟ್ಟರು. ಅನ್ಯ ನುಡಿ, ಆ ನುಡಿಯಲ್ಲಿದ್ದ ಗ್ರಂಥರಾಶಿಗಳಿಂದ ಕಲಿಯಲು ಯೋಚಿಸಲೇ ಇಲ್ಲ. 'ಪ್ರತಿ'ಯಿಲ್ಲದ ಶಿವತತ್ತ್ವದ ಸಾಧನೆಗೆ ತೊಡಗಿದ ಫಲವೇ ವಚನ ರಾಶಿ. ಕನ್ನಡ ಜಗತ್ತು ವರ್ತಮಾನದಲ್ಲಿ ಪ್ರಭುತ್ವಗಳ ಭಾಷೆಗಳಿವೆ. ಕಲಿತರೆ ಹೊಟ್ಟೆ ಪಾಡು ನೀಗೀತು. ಕನ್ನಡದಿಂದ ಬದುಕುವುದನ್ನು, ಬಾಳುವುದನ್ನು ಕಲಿಸಿದ ವಚನಕಾರರ ಕನ್ನಡ ನುಡಿ ಎಂದಿಗೂ ಮಾದರಿ ಮುಂದೆಯೂ.

**೧೦. ವಚನಗಳ ಅಧ್ಯಯನವು ಹಿಡಿಯಬೇಕಾದ ಹೊಸ ದಾರಿಗಳು ಯಾವುವು?**

**ಉತ್ತರ:** ಮಮಕಾರದ ಅಧ್ಯಯನಗಳು ಮತ್ತು ದ್ವೇಷದ ಅಧ್ಯಯನಗಳು ಈ ಎರಡು ನೆಲೆಯಲ್ಲಿ ನಡೆದಿರುವ ಅಧ್ಯಯನಗಳು ಅಪಾಯಕಾರಿ ಎಂದು ಅನಿಸುತ್ತಿದೆ. ಸಿದ್ಧಾಂತಗಳ ಹಿನ್ನೆಲೆಯಲ್ಲಿ ನಡೆದಿರುವ ಅಧ್ಯಯನಗಳು ವಿದ್ವತ್ ಅಧ್ಯಯನಗಳಾಗಿ ನಿಂತಿವೆ. ಯಾವ ಸಿದ್ಧಾಂತಗಳ ಹಿನ್ನೆಲೆಯಿಲ್ಲದ ಅಧ್ಯಯನಗಳಿಂದಲೂ ಪ್ರಯೋಜನವಿಲ್ಲ. ಚಾರಿತ್ರಿಕ ಹಿನ್ನೆಲೆಯ ಅಧ್ಯಯನಗಳು, ವರ್ತಮಾನ ನೆಲೆಯ ಅಧ್ಯಯನಗಳು ನಡೆದಿವೆಯಷ್ಟೆ. ಸಮಗ್ರ ಅಧ್ಯಯನ ಬೇಕೆನಿಸುತ್ತದೆ. ಅಂದರೆ ವಚನ ರಾಶಿಯನ್ನು ಸಮಗ್ರವಾಗಿ ಅನುಸಂಧಾನ ಮಾಡಿ ಬರೆಯಬೇಕು. ಇದು ಸಾಧ್ಯವೇ?

ವಚನ ಸಾಹಿತ್ಯ ಒಂದು ಕಡೆಯಿದೆ. ವಚನೋತ್ತರ ಪಠ್ಯಗಳು ಇನ್ನೊಂದೆಡೆಯಿವೆ. ಪ್ರತ್ಯೇಕ ಪ್ರತ್ಯೇಕ ಅಧ್ಯಯನಗಳೂ ನಡೆದಿವೆ. ಎರಡರ ಸಮನ್ವಯದಲ್ಲಿಯೂ ಅಧ್ಯಯನಗಳು ನಡೆದಿವೆ. ಈ ನೂರು ವರ್ಷಗಳ ಅವಧಿಯಲ್ಲಿ ವಚನಗಳ ವಿಭಿನ್ನ ಓದು-ಅಧ್ಯಯನಗಳು ನಡೆದಿವೆ. ಆದರೂ ನಮ್ಮ ವಚನಗಳ ಓದು-ಅಧ್ಯಯನದಲ್ಲಿ ಹೊಸತನಬೇಕು ಅನ್ನಿಸುವುದಂತೂ ನಿಜ. ವಸ್ತುನಿಷ್ಠ ಓದು, ವ್ಯಕ್ತಿನಿಷ್ಠ ಓದು ಪ್ರತ್ಯೇಕ ನಡೆದಿವೆ. ಈ ಎರಡರ ಅಂತರ್ ಸಂಬಂಧದಲ್ಲಿ ಅಧ್ಯಯನಗಳು ನಡೆಯಬೇಕೆನಿಸುತ್ತದೆ.

**೧೧. ವೈಯಕ್ತಿಕವಾಗಿ ಶರಣ ಚಳುವಳಿಯ ಜೊತೆಗಿನ ನಿಮ್ಮ ಅನುಸಂಧಾನವನ್ನು ಕುರಿತು ಹೇಳಿ:**

**ಉತ್ತರ:** ವಚನಗಳನ್ನು - ಶರಣರನ್ನು ಓದಿಗಾಗಿ ಓದು ನನ್ನ ಅನುಸಂಧಾನವಲ್ಲ. ವಚನಶರಣ ತತ್ವಗಳನ್ನು ತಕ್ಕಮಟ್ಟಿಗಾದರೂ ಕ್ರಿಯೆಯಲ್ಲಿ ಅಳವಡಿಸಿಕೊಳ್ಳುವ ನೆಲೆಯಲ್ಲಿ ನನ್ನ ಅನುಸಂಧಾನವಿದೆ. ನಮ್ಮ ಸಮಾಜಗಳಿಗೆ ವಚನ ಶರಣ ತತ್ವಗಳ ಅಗತ್ಯವಿದೆ. ಅದನ್ನು ಬೋಧಿಸುವ ಜಾಯಮಾನ ನನ್ನದಲ್ಲ. ಯಾಕೆಂದರೆ ಅದು ಕಷ್ಟ. ವೈಯಕ್ತಿಕವಾಗಿ ನಾನು ಅಳವಡಿಸಿಕೊಳ್ಳುವ ಮೂಲಕ ನನ್ನ ನೆಮ್ಮದಿಯನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸುತ್ತೇನೆ.

**೧೨. ಶರಣ ಚಳುವಳಿಯ ಮೂಲ ವ್ಯಕ್ತಿ ವಿಶಿಷ್ಟ ಸಿದ್ಧಾಂತವಾಗಿರಬಹುದೆ?**

**ಉತ್ತರ:** ಪ್ರಾಧ್ಯಾಪಕನಾಗಿ ನಾನು ಕನ್ನಡ ನವ್ಯಸಾಹಿತ್ಯವನ್ನು (ಅಸ್ತಿತ್ವವಾದ) ಮಕ್ಕಳಿಗೆ ಪಾಠ ಮಾಡಿದ್ದೇನೆ. ಆಗ ಯೂರೋಪಿನ ನವ್ಯ ಸಿದ್ಧಾಂತವನ್ನು (ಅಸ್ತಿತ್ವವಾದ) ಪ್ರತಿಪಾದಿಸಿದ ತತ್ವಜ್ಞಾನಿಗಳ ಪರಿಚಯ ಮಾಡಿಕೊಂಡೆ. ಅವರೆಲ್ಲರ ತತ್ವಸಿದ್ಧಾಂತಗಳನ್ನು ಗ್ರಹಿಸಿದಾಗ, ನಮ್ಮ ಶರಣರೂ ವ್ಯಕ್ತಿ ವಿಶಿಷ್ಟವಾದಿಗಳು ಅನ್ನಿಸಿತು. ವೈಯಕ್ತಿಕವಾಗಿ, ಸಾಮಾಜಿಕವಾಗಿ ಯಾವುದೇ ಸಾಧಕ ಸಾಧನ ಮಾಡಿದ ಪುರುಷ (ಸ್ತ್ರೀ) ವ್ಯಕ್ತಿ ವಿಶಿಷ್ಟವಾದಿಯಾಗಿರುತ್ತಾನೆಂದು ಅನ್ನಿಸಿದೆ. ಈ ದೃಷ್ಟಿಯಿಂದ ಬಸವ-ಅಲ್ಲಮರ ನಡುವೆ ವ್ಯತ್ಯಾಸವಿಲ್ಲವೆಂದು ನನಗಂತೂ ಅರಿವಾಗಿದೆ.

●

**ಉಪಚಾರದ ಗುರುವಿಂಗೆ, ಉಪಚಾರದ ಶಿಷ್ಯ**
**ಉಪಚಾರದ ಲಿಂಗ, ಉಪಚಾರದ ಜಂಗಮ**
**ಉಪಚಾರದ ಪ್ರಸಾದವ ಕೊಂಡು**
**ಗುರುವಿಂಗೆ ಭವದ ಲೆಂಕನಾಗಿ**
**ಅಂಧಕನ ಕೈಯ ಅಂಧಕ ಹಿಡಿದಂತೆ**
**ಇವರಿಬ್ಬರು ಹೊಲುಬುಗೆಟ್ಟರು ಕಾಣಾ ಗುಹೇಶ್ವರ.**



# ವಚನ-ವೈಚಾರಿಕತೆ-ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

*ನಂ. ೩೦೨/೨೫, ಜೇನುಕಲ್ ಪ್ಯಾರಡೈಸ್,*
*ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್*
*೧ನೇ ಹಂತ, ಬೆಂಗಳೂರು - ೫೬೦ ೦೮೬*
*೯೪೮೧೦ ೩೫೯೮೩*

"ದೇವರು" ಎಂಬ ಈ ವಿಷಯ ಸೃಷ್ಟಿಸಿದಷ್ಟು ಗೊಂದಲ, ಕ್ಷೋಭೆ, ಭಿನ್ನಾಭಿಪ್ರಾಯ, ಕದನಗಳನ್ನು ಬಹುಶಃ ಮನುಕುಲದ ಇತಿಹಾಸದಲ್ಲಿ ಇನ್ನಾವ ವಿಷಯವೂ ಉಂಟುಮಾಡಿಲ್ಲ. ನಮಗಿಂತ ಮೊದಲು ಈ ಭೂಮಿಯ ಮೇಲೆ ಹುಟ್ಟಿ ವಿಕಾಸವಾಗಿ ನಮ್ಮೊಂದಿಗೇ ಬದುಕುತ್ತಿರುವ ಇನ್ನಾವ ಜೀವಿಗಳನ್ನೂ ಕಾಡದ ಈ ವಿಷಯ ಮಾನವನನ್ನು ಬಹುವಾಗಿ ಕಾಡಿದೆ. ಇದಕ್ಕೆ ಕಾರಣ: ವಿಕಾಸದ ತುತ್ತ ತುದಿಯಲ್ಲಿರುವ ಈ ಹೋಮೋಸೆಪಿಯನ್ ವಿಚಾರ ಮಾಡಬಲ್ಲ ಮತಿವಂತನಾಗಿರುವುದು. ಮೂಲದಲ್ಲಿ ತನ್ನನ್ನು ಹೆದರಿಸಿದ ತನಗಿಂತ ಬಲಶಾಲಿ ಎನಿಸಿದ ಜೊತೆಗಾರರನ್ನು ಓಲೈಸಲು ಅನುಸರಿಸುತ್ತಿದ್ದ ವಿಧಾನವನ್ನೇ ನಿಸರ್ಗದ ಮಳೆ, ಗಾಳಿ, ಬೆಂಕಿ, ಪ್ರವಾಹ, ....ಮುಂತಾದವುಗಳನ್ನು ಸಂತೈಸಲು ಬಳಸಿದ ಮಾನವ ಕ್ರಮೇಣ ಆ ಶಕ್ತಿಗಳಿಗೊಂದು ಹೆಸರಿಟ್ಟ ಅವುಗಳನ್ನು ಓಲೈಸುವ ವಿಧಾನಗಳಿಗೆ "ಪೂಜೆ" ಎಂದು ಕರೆದ. ಮಾನವ ತಾನಿರುವ ಕಾಲ, ಸ್ಥಳ ಮತ್ತು ಅಲ್ಲಿರುವ ಸೌಲಭ್ಯಗಳಿಗೆ ತಕ್ಕಂತೆ ಪೂಜಾ ವಿಧಿ-ವಿಧಾನಗಳನ್ನು ಅಳವಡಿಕೊಂಡ. ಇಡಿಯ ಭೂಮಿಯ ಮೇಲೆ ಹುಟ್ಟಿ ವಿಕಾಸವಾದ ನಾಗರಿಕತೆಗಳು ತಮ್ಮದೇ ಆದ ವಿಧಿ-ವಿಧಾನಗಳಿಗೆ ಬೇರೆ ಬೇರೆ ಹೆಸರುಗಳನ್ನು ಇಟ್ಟರು, ಅವುಗಳನ್ನು ಧರ್ಮಗಳು ಎಂದು ಕರೆದರು. ಅವುಗಳಲ್ಲಿ ಮತ್ತೆ ಜಾತಿ-ಉಪಜಾತಿಗಳು ಹುಟ್ಟಿಕೊಂಡವಾದರೂ ಯಾರಿಗೂ ದೇವರ ಕಲ್ಪನೆ ಸ್ಪಷ್ಟವಾಗಿರಲಿಲ್ಲ. ಎಲ್ಲರೂ ತಮ ತಮಗೆ ತೋರಿದ ರೂಪ ಆಕಾರದಲ್ಲಿ ದೇವರನ್ನು ಕಲ್ಪಿಸಿಕೊಂಡರು. ಎಲ್ಲರಿಗೂ ಅವರವರ ವಿಧಾನಗಳು ಶ್ರೇಷ್ಠವಾದವು.

ಹನ್ನೆರಡನೆಯ ಶತಮಾನದಲ್ಲಿ ಶರಣರು ದೇವರನ್ನು ಕಲ್ಪಿಸಿಕೊಂಡ ದೇವರ ಸ್ವರೂಪ ಅವರ ಹಲವಾರು ವಚನಗಳಲ್ಲಿ ಕಂಡು ಬರುತ್ತದೆ.

**ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ!**
**ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ!**
**ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ!**
**ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೇ,**
**ಕೂಡಲಸಂಗಮದೇವಯ್ಯ,**
**ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ**

ಇಡಿಯ ವಿಶ್ವವನ್ನು ವ್ಯಾಪಿಸಿರುವ ಆ ಮಹಾನ್ ಶಕ್ತಿಯನ್ನು, ಇಡಿಯ ಬ್ರಹ್ಮಾಂಡವನ್ನು ಮೀರಿದ ಪ್ರಮಾಣಕ್ಕೆ ಸಿಗದ, ಅಗೋಚರವೂ ಅಪ್ರತಿಮವೂ ಆದ ದೇವನನ್ನು ಅವರು ಕಲ್ಪಿಸಿಕೊಂಡರು, ಇಂದಿಗೂ ನಮ್ಮ ಊಹೆಗೆ ನಿಲುಕದಿರುವ ಈ ವಿಶಾಲ ವಿಶ್ವದ ಬಗೆಗಿನ ಅವರ ಕಲ್ಪನೆ ಎಷ್ಟೊಂದು ವೈಜ್ಞಾನಿಕ ಎಂದು ಅಚ್ಚರಿಯಾಗುತ್ತದೆ. ಹಾಗಾದರೆ ನಿರಾಕಾರನಾದ

ಆ ಶಕ್ತಿಯನ್ನು ಆರಾಧಿಸಲು ಸಾಧನವಾಗಿ ಮಾತ್ರ ಸಾಂಕೇತಿಕವಾಗಿ ಇಷ್ಟಲಿಂಗವನ್ನು ರೂಪಿಸಿಕೊಂಡರು. ಅದುವೇ ದೇವರಲ್ಲ ಅದು ಕೇವಲ ಸಂಕೇತ ಮಾತ್ರ ಎನ್ನುವುದನ್ನು ಇಲ್ಲಿ ನೆನಪಿಡಬೇಕು. ನಾವು ನೆಲದ ಮೇಲೆ ನಿಂತು ಕತ್ತೆತ್ತಿ ನಮ್ಮ ಸುತ್ತಲಿನ ಜಗತ್ತನ್ನು ಅವಲೋಕಿಸಿದಾಗ ಹೇಗೆ ಕಾಣುತ್ತದೆ? ನಡುವೆ ನಾವು, ನಮ್ಮ ತಲೆಯ ಮೇಲೆ ಬಾಣಲೆಯೊಂದನ್ನು ಬೋರಲು ಹಾಕಿದಂತೆ. ಅದೇ ವಿಶ್ವವನ್ನು ಕಲ್ಪಿಸಿಕೊಂಡು ಇಷ್ಟಲಿಂಗ ರೂಪು ತಳೆಯಿತು. ಆ ಬೃಹತ್ ಬ್ರಹ್ಮಾಂಡವನ್ನು ಚುಳುಕಾಗಿಸಿ ಧ್ಯಾನಕ್ಕೆ ಇಷ್ಟಲಿಂಗವನ್ನು ಸಾಧನವನ್ನಾಗಿಸಿಕೊಂಡರು.

**ಪಾತಾಳವಿತ್ತತ್ತ, ಪಾದಂಗಳತ್ತತ್ತ,**
**ನೀವೆನ್ನ ಕರಸ್ಥಳಕೆ ಬಂದು ಚುಳುಕಾದಿರಲ್ಲಾ**
**ದಶದಿಕ್ಕು ಇತ್ತಿತ್ತ, ದಶಭುಜಂಗಳತ್ತತ್ತ,**
**ಬ್ರಹ್ಮಾಂಡವಿತ್ತಿತ್ತ, ಮಣಿಮುಕುಟವತ್ತತ್ತ,**
**ಚೆನ್ನಮಲ್ಲಿಕಾರ್ಜುನಯ್ಯಲಿಂಗವೆ**
**ಎನ್ನುವಲ್ಲಿ ಮಹದೇವಿಯಕ್ಕ ನುಡಿಯುತ್ತಿರುವುದು ತನ್ನ ಅಂಗೈಯಲ್ಲಿರುವ**

ಇಷ್ಟಲಿಂಗವನ್ನು ಕುರಿತು ಆಗಿದ್ದರೂ ಸಹ ಕಲ್ಪನೆಯಲ್ಲಿ ಬೃಹತ್ ಬ್ರಹ್ಮಾಂಡವನ್ನು ಮೀರಿದ ಮಹಾನ್ ಶಕ್ತಿ ಅಥವಾ ವಿಶ್ವದ ಅರಿವು ಇಲ್ಲಿ ಕಂಡುಬರುತ್ತದೆ. ಆದುದರಿಂದಲೇ ಶರಣರಿಗೆ "ಇವನಾರವ" ಎನ್ನದಿರಲು ಸಾಧ್ಯವಾಯಿತು. ಈ ಮಹಾನ್ ಸೃಷ್ಟಿಯ ಎಲ್ಲ ಸದಸ್ಯರನ್ನು ಒಂದೇ ಎಂಬ ಭಾವನೆಯ ಅಡಿಯಲ್ಲಿ ನೋಡಲು ಸಾಧ್ಯವಾಯಿತು. ಈ ಬೃಹತ್ ಕಲ್ಪನೆ ಇದ್ದದ್ದು ನಿಜವಾದರೆ, ಇಷ್ಟ ಲಿಂಗ ಪೂಜೆ, ನೇಮ, ನಿತ್ಯಗಳನ್ನೇಕೆ ಪಾಲಿಸಿದರು? ಅದಾದರೂ ಏಕೆ ಬೇಕಿತ್ತು? ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಮನಸ್ಸನ್ನು ಏಕಾಗ್ರತಗೊಳಿಸಲು ಆಕಾರವೇ ಇಲ್ಲದ ಆ ತತ್ವವನ್ನು ಅರಿಯಲು, ಮಾತ್ರ ಈ ಆಚರಣೆಗಳ ಅವಶ್ಯಕತೆ ಇತ್ತೇ ಹೊರತಾಗಿ ಅವರು "ಅರಿವು" ಎಂದು ಕರೆದ ಆ ಜ್ಞಾನವನ್ನು ಪಡೆದುಕೊಂಡ ಮೇಲೆ ಅವರ ನಿಲುವು ಕೂಡಾ ಇದೆಲ್ಲವನ್ನೂ ಮೀರಿರುತ್ತಿತ್ತು.

**ನಿಷ್ಠೆಯುಳ್ಳಾತಂಗೆ ನಿತ್ಯ ನೇಮದ ಹಂಗೇಕೆ?**
**ಸತ್ಯವುಳ್ಳಾತಂಗೆ ತತ್ವ ವಿಚಾರದ ಹಂಗೇಕೆ?**
**ಅರಿವುಳ್ಳಾತಂಗೆ ಅರ್ಘವಣಿಯ ಹಂಗೇಕೆ?**
**ಮನಶುದ್ಧವುಳ್ಳವಂಗೆ ಮಂತ್ರದ ಹಂಗೇಕೆ?**
**ಭಾವಶುದ್ಧವುಳ್ಳವಂಗೆ ಹೂವಿನ ಹಂಗೇಕೆ?**
**ಕೂಡಲಚೆನ್ನಸಂಗಯ್ಯಾ**
**ನಿಮ್ಮನರಿದಾತಂಗೆ ನಿಮ್ಮ ಹಂಗೇಕೆ?**

ಚೆನ್ನಬಸವಣ್ಣನವರ ಈ ವಚನದಲ್ಲಿ ದೇವರ ನಿಜ ಸ್ವರೂಪವನ್ನು ಅರಿತವನಿಗೆ ನಿತ್ಯ ನೇಮದ ಹಂಗಾಗಲೀ, ತತ್ವವಿಚಾರದ ಹಂಗಾಗಲಿ ಇಲ್ಲ ಅವನ ನಿಷ್ಠೆಯೇ ಅವನಿಗೆ ಸಾಕು. ಸತ್ಯವಂತನೂ, ಮನ ಶುದ್ಧವುಳ್ಳವನೂ ಆದವನಿಗೆ ಜಲಾಭಿಷೇಕ, ಮಂತ್ರ, ಹೂವು ಯಾವುದೂ ಬೇಕಿಲ್ಲ. ಕೊನೆಗೆ ಕೂಡಲ ಚೆನ್ನಸಂಗಯ್ಯಾ ನಿಮ್ಮ ಹಂಗೂ ನಿಮ್ಮನ್ನು ಅರಿತ ಮೇಲೆ ಇಲ್ಲ ಎನ್ನುವಲ್ಲಿ ಶರಣರು ಇವೆಲ್ಲಕ್ಕಿಂತ ಅವರ ನಡೆ, ನುಡಿಗೆ, ಬದುಕಿನ ರೀತಿಗೆ ಮಹತ್ವವನ್ನು ಕೊಡುತ್ತಿದ್ದರು ಎನ್ನುವುದು ತಿಳಿದು ಬರುತ್ತದೆ. ಈ ರೀತಿಯ ಆದರ್ಶವನ್ನು ನಾವು ಇನ್ನೆಲ್ಲಿಯೂ ಕಾಣಲು ಸಾಧ್ಯವಿಲ್ಲ.

**ಆಡಬಾರದ ಬಯಲು, ನೋಡಬಾರದಾ ಬಯಲು,**
**ನುಡಿಯಬಾರದಾ ಬಯಲು, ಹಿಡಿಯಬಾರದಾ ಬಯಲು,**



**ಈ ಒಡಲಿಲ್ಲದಾ ಬಯಲೊಳಗೆ ಅಡಗಿರ್ದ ಭೇದವ**
**ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥ**

ಆ ಮಹಾಘನವನ್ನು "ಬಯಲು" ಎನ್ನುವಲ್ಲಿ ಶರಣರು ಅದನ್ನು ಏನೂ ಇಲ್ಲದ ಬಯಲು ಎಂದು ಭಾವಿಸಲಿಲ್ಲ. ಬದಲಾಗಿ ಸರ್ವಸ್ವನ್ನು ಇಂಬಿಟ್ಟುಕೊಂಡಿರುವ ಮಹಾಬಯಲು ಎಂದು ಅರ್ಥೈಸಿಕೊಂಡರು. ವಿಜ್ಞಾನದ "ಕಾಸ್ಮಾಸ್" ಅಥವಾ ಬ್ರಹ್ಮಾಂಡಕ್ಕೆ ಸಮನಾದ ಬಯಲು ಇದು. ಅಲ್ಲಿ ಏನೂ ಇಲ್ಲ ಎಂಬಂತೆ ತೋರಿದರೂ ಅದು ಎಲ್ಲವನ್ನು ಒಳಗೊಂಡಿದೆ. ಅದರಲ್ಲಿರುವ ಎಲ್ಲದರ ಅರಿವು ನಮಗಿನ್ನೂ ಆಗಿಲ್ಲ. ಆ "ಅರಿವ"ನ್ನೇ ಶರಣರು ಹುಡುಕಿದ್ದು ಆರಾಧಿಸಿದ್ದು.

**ಸತ್ಯವೂ ಇಲ್ಲ, ಅಸತ್ಯವೂ ಇಲ್ಲ;**
**ಸಹಜವೂ ಇಲ್ಲ, ಅಸಹಜವೂ ಇಲ್ಲ;**
**ನಾನೂ ಇಲ್ಲ, ನೀನೂ ಇಲ್ಲ**
**"ಇಲ್ಲ" "ಇಲ್ಲ" ಎಂಬುದು ತಾನಿಲ್ಲ**
**ಗುಹೇಶ್ವರನೆಂಬುದು ತಾ ಬಯಲು!**

ಅಲ್ಲಮಪ್ರಭುಗಳು ತಮ್ಮ ಈ ವಚನದಲ್ಲಿ ನೇರವಾಗಿ ಗುಹೇಶ್ವರನೇ ಬಯಲು ಎನ್ನುತ್ತಾ, ಶರಣರ ದೈವದ ಕಲ್ಪನೆಯನ್ನು ಮತ್ತಷ್ಟು ಖಚಿತಗೊಳಿಸುತ್ತಾರೆ. ಯಾವುದಾದರೊಂದು "ಇದೆ" ಎಂದಾಗ "ಇಲ್ಲ" ಎನ್ನುವ ಪ್ರತಿವಾದ ಹುಟ್ಟಿಕೊಳ್ಳುತ್ತದೆ. ಆದರೆ ಇಲ್ಲಿ, ಇದೆ ಅಥವಾ ಇಲ್ಲ ಎನ್ನಲು ಅದಕ್ಕೆ ಹುಟ್ಟು ಇಲ್ಲ ಸಾವೂ ಇಲ್ಲ. ಹುಟ್ಟುವುದು ಸಾಯುವುದು ದೇವರ ಲಕ್ಷಣವಲ್ಲ. ಇದು ಅದಾವುದರ ಹಂಗಿಗೆ ಸಿಲುಕದ ಆದರೆ ಎಲ್ಲಕ್ಕೂ ಕಾರಣೀಭೂತವಾದ ತತ್ವವಾಗಿದ್ದು ಎಲ್ಲರಲ್ಲೂ, ಎಲ್ಲವನ್ನು ಒಳಗೊಂಡ ಘನ ಮಾತ್ರವಾಗಿದೆ. ಭೂಮಿ, ಆಕಾಶ, ಪಾತಾಳಗಳಲ್ಲಿ ದೇವರನ್ನು ಹುಡುಕುತ್ತ ಹೋದರೆ ಸಿಗುವನೆ? ಸಿಕ್ಕರೆ ಅವನು ಹೇಗಿರುವನು?

**ಪೃಥ್ವಿಯೊಳಗಿಲ್ಲ, ಆಕಾಶದೊಳಗಿಲ್ಲ,**
**ಚತುರ್ದಶ ಭುವನಾದಿ ಭುವನಂಗಳೊಳಗೆಯೂ ಇಲ್ಲ.**
**ಹೊರಗೆಯೂ ಇಲ್ಲ- ಏನಾಯಿತ್ತೆಂದಯೆನಯ್ಯಾ,**
**ಗುಹೇಶ್ವರ ಅಂದೂ ಇಲ್ಲ ಇಂದೂ ಇಲ್ಲ ಎಂದೂ ಇಲ್ಲ.**

ಎನ್ನುತ್ತಾ ಅಲ್ಲಮ ಪ್ರಭುಗಳು, ಮತ್ತೂ ಒಂದು ಹೆಜ್ಜೆ ಮುಂದೆ ಹೋಗಿ ಇಲ್ಲದ್ದನ್ನು ಹೇಳುತ್ತಾರೆ. ಹಾಗಾದರೆ ಇರುವುದು ಏನು? ಅದು ಆ ಮಹಾಘನದ ನಮ್ಮ ಅರಿವು ಮಾತ್ರ, ಆ ನಮ್ಮ ಅರಿವೇ ನಮ್ಮ ದೇವರು.

**ಅರಿದೆನೆಂಬುದು ತಾ ಬಯಲು,**
**ಅರಿಯನೆಂಬುದು ತಾ ಬಯಲು,**
**ಅರುಹಿನ ಕುರುಹಿನ ಮರಹಿನೊಳಗೆ**
**ಗುಹೇಶ್ವರನೆಂಬುದು ತಾ ಬಯಲು.**

"ಬಯಲು" ಎನ್ನುವ ಈ ಕಲ್ಪನೆಯೇ ವೈಜ್ಞಾನಿಕವಾಗಿದ್ದು, ನಿಜಕ್ಕೂ ವಿಶ್ವದ ಅರಿವೇ ನಿಜದ ಅರಿವು ಎನ್ನುವ ಉದಾತ್ತವಾದ ಕಲ್ಪನೆಯನ್ನು ಒಳಗೊಂಡಿದೆ. ಅಲ್ಲಿಯ ಒಂದು ಅತೀ ಚಿಕ್ಕ ಕಣ ಮಾತ್ರವಾಗಿರುವ ಮಾನವ ತನ್ನನ್ನು ತಾನರಿದು, ಸಕಲ ಜೀವಾತ್ಮರಿಗೆ ಲೇಸನ್ನು ಬಯಸುತ್ತ, ಜ್ಞಾನದ ಬೆಳಗಿನಲ್ಲಿ, ಬಯಲು ಬಯಲನೆ ಬಿತ್ತಿ ಬೆಳೆದು ಬಯಲು ಬಯಲಾಗುವಂತೆ ಎಲ್ಲರೂ ಈ ಮಹಾನ್ ಬಯಲಿನಲ್ಲಿ ಒಂದಾಗಿ ಬಯಲಾದರು ಎನುವಲ್ಲಿ, ಭೌತವಿಜ್ಞಾನದ ಬಲು ದೊಡ್ಡ ತತ್ವವೇ ಅಡಗಿದೆ.

●

# ಅನುಭವ ಮಂಟಪ

**ಪ್ರಾ. ಆರ್.ಎಸ್. ಲೆಕ್ಕದ**

*ಬಸವವಿಜಯ*
*ಕಮತಗಿ-೫೮೭೧೨೦*
*ಜಂಗಮವಾಣಿ-೯೪೪೯೧೭೬೪೯೯*

ಹನ್ನೆರಡನೇ ಶತಮಾನದ ಬಸವಾದಿ ಶರಣರ ಪರಿಕಲ್ಪನೆಯ ಅನುಭವ ಮಂಟಪ ಒಂದು ವಿಸ್ಮಯ! ಜಾಗತಿಕ ವಿಸ್ಮಯ!! ರಾಜ ಮಹಾರಾಜರ ಪ್ರಭುತ್ವದ ಆ ಕಾಲದಲ್ಲಿ ಪ್ರಜಾಪ್ರಭುತ್ವದ ಮೂಲ-ಬೇರುಗಳು ಅನುಭವಮಂಟಪ ರಚನೆಯಲ್ಲಿ ಚಿಂತನ-ಮಂಥನದಲ್ಲಿ ಕಾಣಸಿಗುತ್ತವೆ. ಕಲ್ಯಾಣ ರಾಜ್ಯ, ಮಾನವೀಯತೆ, ವಿಶ್ವಬಂಧುತ್ವಗಳಂಥ ಮೌಲಿಕ ಸಿದ್ಧಾಂತಗಳು ಅನುಭವಮಂಟಪ ಮೂಲಕ ಬಳುವಳಿಯಾಗಿ ಬಂದ ಕೊಡುಗೆಗಳು. ಶರಣರ ಚಿಂತನೆಗಳಿಂದ ಅನುಭವಮಂಟಪದ ಸಂವಾದಗಳಿಂದ, ಚಿಂತನ-ಮಂಥನದಿಂದ ಹೊರಹೊಮ್ಮಿದ ಅನುಭಾವವೆಂಬ ನವನೀತವೆ ವಚನಗಳು.

ವಚನಗಳು ಗದ್ಯ, ಪದ್ಯ: ವಚನಗಳು ಶಾಸ್ತ್ರ, ಧರ್ಮ; ಧರ್ಮಗ್ರಂಥ, ಪಠ್ಯಗಳು. ಪಾಶ್ಚಿಮಾತ್ಯ ವಿದ್ವಾಂಸರಾದ ಪಿ.ಜೆ ಶೌಟನ್(ನೆದರಲ್ಯಾಂಡ), ಬ್ಲೇಕ್ ಮೈಕಲ್(ಅಮೇರಿಕಾ) ಭಾರತಕ್ಕೆ ಆಗಮಿಸಿ ಕನ್ನಡ ಕಲಿತು ವಚನಗಳ ಅಧ್ಯಯನ ಮಾಡಿ ಗ್ರಂಥಗಳನ್ನು ರಚಿಸಿದ್ದಾರೆ. ಹಾಗೆಯೆ ಹಲವು ವಿದ್ವಾಂಸರು ಈ ಸಾಲಿನಲ್ಲಿ ಬರಬಹುದು. ವಿಶ್ವವ್ಯಾಪಿ ವಿದ್ವಾಂಸರ ಗಣ್ಯರ ಗಮನವನ್ನು ವಚನಗಳು ಮತ್ತು ಅನುಭವಮಂಟಪ ಸೆಳೆದುದು ನಿರ್ವಿವಾದ. ಇಂಗ್ಲೆಂಡ್ ಮತ್ತು ದುಬೈ ದೇಶಗಳಲ್ಲಿ ಬಸವೇಶ್ವರರ ಪ್ರತಿಮೆ ಸ್ಥಾಪಿಸಲ್ಪಟ್ಟಿದುದು ನಿದರ್ಶನ.

ಅನುಭಾವಕ್ಕೆ ವೇದ್ಯವಾಗುವ ಜ್ಞಾನ ಭಕ್ತಿಗಳೆ ಚಿರಸ್ಥಾಯಿಯಾಗಿ ಉಳಿಯತಕ್ಕವು. ಅನುಭಾವದ ಕಸಿಗೆ ಸಿಲುಕಿದ ಮನುಷ್ಯ ಹಣ್ಣಾಗುತ್ತಾನೆ, ಅವನ ಜೀವನ ಪಕ್ವವಾಗುತ್ತದೆ. ಆಚಾರ-ವಿಚಾರಗಳೆಲ್ಲವು ಪವಿತ್ರವಾಗುತ್ತವೆ, ಅನುಭವಮಂಟಪ ಇದನ್ನು ಸಾಧಿಸಬೇಕೆಂದು ಬಸವಣ್ಣನವರು ಬಯಸಿ ಕಲ್ಯಾಣದಲ್ಲಿ ಸ್ಥಾಪಿಸಿದರು. ಅನುಭವಮಂಟಪ ಯಾವ ಆಕಾರವನ್ನು ತೆಗೆದುಕೊಂಡಿತು, ಅದರ ಪ್ರಧಾನ ಪೀಠ ಶೂನ್ಯಸಿಂಹಾಸನವನ್ನು ಬಸವಣ್ಣನವರು ಯಾವ ರೀತಿ ನಿರ್ಮಿಸಿದರೆಂಬುದನ್ನು ಚಾಮರಸಾದಿಕವಿಗಳು ಮನೋಜ್ಞವಾಗಿ ವರ್ಣಿಸಿದ್ದಾರೆ. ನೀಲಾಂಬಿಕೆಯು ತನ್ನ ವಚನದಲ್ಲಿ ಕೆಳಗಿನಂತೆ ವರ್ಣಿಸಿದ್ದಾಳೆ.

**"ಅಷ್ಟದಳ ಕಮಲದ ಹೂಗಲ್ಲವಿಡಿದು ಶೂನ್ಯ ಸಿಂಹಾಸನಕೆ ಧವಳಾಲಯವೆತ್ತಿತ್ತು**
**ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮ ದ್ವಾರಮಂ ತೆಗೆದು ನೋಡುವರೆ ವಿಪರೀತ**
**ಏಕೋಭಾವವೆಂಬುದೊಂದು ಕಂಭ।"** ಅದಕ್ಕೆ ಅನೇಕ ಚಿತ್ರಂಗಳಡಗಿದ ಪ್ರಭೆಯೊಳಗೆ ಬ್ರಹ್ಮರಂದ್ರವೆಂಬ ಮಸ್ತಕದ ಮೇಲೆ ಪವಳ ಹಾರದ ಪಂಚರಂ ಕಟ್ಟಿ, ಪಂಚ ಮೌಕ್ತಿತದ



ಮಾಲೆಯ ನಿಲಿಯಬಿಟ್ಟು, ಮಲುಕು ಮಲಕಿನ ನಡುವೆ ಕಟ್ಟಿದು ನವರತ್ನದ ಗೊಂಡೆಯಂಗಳು। ಕಾಳಿಕೆಯ ಕಪ್ಪಡವದಕೆ ಮೇಲುಹೊದಕೆ। ಉಳುಹಿನರಳೆಲೆಯ ಬಲಸುದೋರನವ ಕಟ್ಟಿ, ದಶವಾಯುಗಳನುಂದು ಮಾಡಿ, ಲಿಂಗ ಸುಖವಾಯುವ ಸಂತೈಸಿ ಆಳವಟ್ಟಿವಂ ಮಾಡಿ, ಲಂಬಿಸಿದ ಮಂದಾನಿಲನಂಮಲಗಂ ಮಾಡಿ, ಹರುಷನೀವ ವಸಂತನ ಚಾಕವಟ್ಟಿಗೆಯ ಆಸನವಂ ಮಾಡಿ, ನವನಾಳ ಸುನಾಳದೊಳು ಮೊರೆವ ಶಬ್ದಮಂ ಶುಕಪಿಕ ಭ್ರಮರಾಮೋದಮಂ ಮಾಡಿ, ಪರಮಶಾಂತಿ ಎಂಬ ಶೈತ್ಯಾಕಾರ ಸೋಂಕಿನ ಚೂತ ಫಲಂಗಳಂ ಹಾಕಿ ಉತ್ತರದ್ವಾರವೆಂಬ ನುಶುಳು ಗಂಡಿಯಂ ರಚಿಸು, ಪೂರ್ವಯೋಗಗಳೆಂಬ ಸೋಪಾನಮಂ ಮಾಡಿ, ಪಶ್ಚಿಮ ದ್ವಾರವೆಂಬ ನಿಜದ್ವಾರಮಂ ಮಾಡಿ, ಸಪ್ತವೆಸನ ಪಂಚೇಂದ್ರಿಯಗಳೆಂಬ ಗವಾಕ್ಷಿಯನಿಕ್ಕಿ, ಆಸಿಯಾಮಿಷಮಂ ಕೆಡಿಸಿ, ಉರ್ಧ್ವ ಚಕ್ರವೆಂಬ ಮೇಲುಪ್ಪರಿಗೆಯಂ ಮಾಡಿ ಚಂದ್ರ ಸೂರ್ಯರೆಂಬ ದೀಪಗಳಂ ಬೆಳಗಿ ಶವೋಹವೆಂಬ ಶಿಖರಿಯ ಮೇಲೆ ಮಹಾಜ್ಞಾನ ಪ್ರಕಾಶವೆಂಬ ಹೊನ್ನ ಕಳಸವ ಸಿಂಗಾರವಂ ಮಾಡಿ, ನಿಃಶೂನ್ಯ ನಿರಾಳವೆಂಬ ಶೂನ್ಯ ಸಿಂಹಾಸನಂ ಮಾಡಿದ ಬಸವಪ್ರಿಯ ಕೂಡಲ ಚನ್ನಸಂಗನಲ್ಲಿ ಎನ್ನ ಪರಮಗುರು ಸಂಗನಬಸವಣ್ಣ"

ಕನಕ ಮಕರತ ಮೊದಲಾದ ಮಣಿಗಳಿಂದ ಮಿನುಗುವಂತೆ ಪೀಠವನ್ನು ರಚಿಸಿ ಇಂದುಕಾಂತದ ಶಿಲೆಯಿಂದ ಸಪ್ತ ಸೋಪಾನಗಳನ್ನು ನಿರ್ಮಿಸಿ ಹೊರವಲಯದಲ್ಲಿ ಒಂಬತ್ತು ಬಾಗಿಲು ಮಧ್ಯದಲ್ಲಿ ನಾಲ್ಕು ಗರ್ಭವಲಯದಲ್ಲಿ ಎರಡು ಬಾಗಿಲುಗಳನ್ನು ರಚಿಸಿ, ಶಿಖರದಲ್ಲಿ ಅರಿವಿನಂಬರ ಪೀಠವನ್ನು ರಚಿಸಿದರು. ಚಾಮರಸನು ಹರಿತವಾದ ಅಲಗುಗಳಿಂದ ಶೂನ್ಯ ಸಿಂಹಾಸನವನ್ನು ರಚಿಸಿದ್ದರೆಂದು ಸಾಂಕೇತಿಕವಾಗಿ ಹೇಳುತ್ತಾನೆ. ಸ್ಥಾನದ ಗುರುತರವಾದ ಮಹತ್ವ ಅಲುಗುಗಳ ಮೇಲೆ ಕುಳಿತುಕೊಳ್ಳುವುದು ಕಠಿಣ ಸಾಧ್ಯವಾಗಿತ್ತು. ಷಟ್ಸ್ಥಲ ಅಷ್ಟಾವರಣ, ಪಂಚಾಚಾರಗಳಿಗೆ ಅತೀತನಾದ ಮಹಾವ್ಯಕ್ತಿಗಾಗಿ ಆಪೀಠವು ಕಾಯ್ದಿಡಲಾಯಿತು. ಅಂಥ ಮಹಾತ್ಮನ ಬರವನ್ನು ಕಾಯುತ್ತಿದ್ದ ಬಸವಣ್ಣನವರಿಗೆ ವ್ಯೋಮಮೂರುತಿ ಅಲ್ಲಮಪ್ರಭುದೇವರ ಆಗಮನದಿಂದ ಸಂತುಷ್ಟರಾಗುತ್ತಾರೆ.

ಶರಣ ಸಿದ್ಧಾಂತ, ತತ್ವಗಳು ಸರ್ವಕಾಲಿಕ, ಸರ್ವಸ್ಥಾನಿಕ. ಯುಗಯುಗಗಳುದ್ದಕ್ಕೂ ಪ್ರಸ್ತುತ ಅಂತಹ ತತ್ವಾದರ್ಶಗಳೆಲ್ಲ ಭಾರತ ಸಂವಿಧಾನದಲ್ಲಿ ಅಳವಡಿಸಲ್ಪಟ್ಟು ವ್ಯಕ್ತಿ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ವರ್ಣ, ವರ್ಗ, ಲಿಂಗ, ಜಾತಿ-ಮತರಹಿತ ಕಾಯಕ. ಅಸಂಗ್ರಹ ತತ್ವಾಧಾರಿತ ಸುಖಿ ಸಮಾಜ ನಿರ್ಮಾಣದತ್ತ ಚಲನಶೀಲ ಪ್ರಕ್ರಿಯೆಗೆ ನಿರ್ದೇಶಕ ತತ್ವಗಳಾಗಿವೆ, ಮಾರ್ಗದರ್ಶಿಯಾಗಿವೆ. ವಿದ್ವಾಂಸರಾದ ಪ್ರೊ.ಎಸ್.ಜಿ. ಸಿದ್ಧರಾಮಯ್ಯ, ಪ್ರೊ.ಬಿ. ವಿರುಪಾಕ್ಷಪ್ಪ, ಡಾ. ರಂಜಾನ ದರ್ಗಾ, ವೀಣಾ ಬನ್ನಂಜೆ ಮುಂತಾದವರು ಹಾಗು ಗೌರವಾನ್ವಿತ ಜಸ್ಟಿಸ್ ಶಿವರಾಜ ಪಾಟೀಲ, ಜಸ್ಟಿಸ್ ನಾಗಮೋಹನದಾಸ, ಜಸ್ಟಿಸ್ ನಾಗರಾಜ ಅರಳಿ, ಜಸ್ಟಿಸ್ ಪಾಶ್ಚಾಪುರ ಮೊದಲಾಗಿ ವ್ಯಾಖ್ಯಾನಿಸಿದ್ದಾರೆ.

ನಮ್ಮ ದೇಶದ ನೂತನ ಸಂಸತ್ ಭವನದ ಶಿಲಾನ್ಯಾಸ ನೆರವೇರಿಸಿ ಭಾಷಣ ಮಾಡಿದ ಪ್ರಧಾನಿ ನರೇಂದ್ರ ಮೋದಿಯವರು ಬಸವಣ್ಣ ಸ್ಥಾಪಿಸಿದ ಅನುಭವಮಂಟಪದ ಪರಿಕಲ್ಪಣೆಯನ್ನು ಸ್ಮರಿಸಿ, ಈ ಅನುಭವಮಂಟಪ ಜನಸಭೆ ನಾಡಿನ ಮತ್ತು ರಾಷ್ಟ್ರದ ಉನ್ನತಿ ಹಾಗು ಅಭಿವೃದ್ಧಿಗೆ ಪೂರಕವಾಗಿ ಕೆಲಸ ಮಾಡಲಿದೆ ಎಂದು ಬಸವಣ್ಣನವರ ಮಾತುಗಳನ್ನು ಕನ್ನಡದಲ್ಲಿಯೇ ಹೇಳಿದರು. ಬಸವಣ್ಣನವರ ವಚನ ಹಾಗು ಸಿದ್ಧಾಂತಗಳನ್ನು ಮೇಲಿಂದ ಮೇಲೆ ತಮ್ಮ ಮಾತುಗಳಲ್ಲಿ ಉಲ್ಲೇಖಿಸುತ್ತಿರುವುದು ಅನುಭವ ಮಂಟಪದ ಮಹತಿಗೆ ಉತ್ಕೃಷ್ಟತೆಗೆ

ನಿದರ್ಶನವಾಗಿದೆ.

ನೂತನ ಅನುಭವ ಮಂಟಪ: ಹನ್ನೆರಡನೇ ಶತಮಾನದ ಅನುಭವ ಮಂಟಪದ ಮಾದರಿಯಲ್ಲಿ ಬಸವಕಲ್ಯಾಣದಲ್ಲಿ ನೂತನ ಅನುಭವಮಂಟಪ ಸ್ಥಾಪನೆಯ ಕುರಿತು ೨೦೧೬ರಲ್ಲಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ಧರಾಮಯ್ಯನವರು, ಶ್ರೀ ಗೊ.ರು.ಚನ್ನಬಸಪ್ಪ ಅವರ ನೇತೃತ್ವದಲ್ಲಿ ಸಮಿತಿ ರಚಿಸಿ, ೨೦೧೭ರಲ್ಲಿ ವರದಿಯನ್ನು ಸ್ವೀಕರಿಸಿದ ಹಿನ್ನೆಲೆಯಲ್ಲಿ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪ ಅವರು ೨೦೨೧ನೇ ಜನವರಿ ೬ರಂದು ಬಸವಕಲ್ಯಾಣದ ತ್ರಿಪುರಾಂತಕ ಕೆರೆಯ ದಂಡೆಯ ಮೇಲೆ ನೂತನ ಅನುಭವ ಮಂಟಪದ ಶಂಕುಸ್ಥಾಪನೆ ನೆರವೇರಿಸಿ ಮೊದಲ ಹಂತದ ಅನುದಾನ ಬಿಡುಗಡೆ ಮಾಡಿದ್ದಾರೆ.

**ನೀಲನಕ್ಷೆಯಂತೆ ರಚನೆಯಾಗುವ ನೂತನ ಅನುಭವ ಮಂಟಪದ ವಿಶಿಷ್ಟ ವಿಶೇಷಗಳು:**

ಶರಣ ಸಿದ್ಧಾಂತದ ಅಷ್ಟಾವರಣ ಪಂಚಾಚಾರ ಷಟ್ಸ್ಥಲಗಳು ಕಾಯಕ ದಾಸೋಹ ಜೀವನ ಸೂತ್ರಗಳನ್ನು ಆಧರಿಸಿ ಮಂಟಪ ನಿರ್ಮಾಣವಾಗಲಿದೆ. ಕಲಚೂರಿ ಚಾಲುಕ್ಯರ ವಾಸ್ತುಶಿಲ್ಪ ಶೈಲಿಯಲ್ಲಿ ವೃತ್ತಾಕಾರದಲ್ಲಿ ನಿರ್ಮಾಣವಾಗಲಿರುವ ಈ ಕಟ್ಟಡದ ಮೇಲುತುದಿಯಲ್ಲಿ ನೂರು ಅಡಿ ವ್ಯಾಸದ ಲಿಂಗಾಕಾರದ ಬೃಹತ್ ಗೋಪುರ ಇರಲಿದೆ. ನೆಲಮಾಳಿಗೆಯಲ್ಲಿ ೧೫೦೦ ಜನರು ಪ್ರಸಾದ ಸ್ವೀಕರಿಸುವಷ್ಟು ದಾಸೋಹ ಭವನ ನಿರ್ಮಾಣವಾಗಲಿದೆ. ಎಲ್ಲ ಅಂತಸ್ತುಗಳಲ್ಲಿ ಶರಣರ ವಿಚಾರಧಾರೆಗೆ ಸಂಬಂಧಿಸಿದ ಚಿಂತನಾ ಮಂಟಪಗಳು, ಲಿಂಗಾನುಷ್ಠಾನದ ಗುಹೆಗಳು, ಕಂಬಗಳ ಮೇಲೆ ವಚನಗಳು ಕೆತ್ತನೆ, ಭಿತ್ತಿ ಚಿತ್ರ, ಉಬ್ಬು ಚಿತ್ರಗಳು ಇರಲಿವೆ. ೭೭೦ ಅಮರಗಣಂಗಳ ಸಂಕೇತವಾಗಿ ೭೭೦ ಆಸನಗಳ ಸಭಾಭವನ ಮೇಲಂತಸ್ತಿನಲ್ಲಿ ಇರಲಿದೆ. ಈ ಮಹಾಮನೆಯ ಕ್ಷೇತ್ರದಲ್ಲಿ ಸ್ವಾಗತ, ಭದ್ರತೆ, ಆಡಳಿತ ಕಛೇರಿ, ಗ್ರಂಥಾಲಯ, ಸಂಶೋಧನಾ ಕೇಂದ್ರ, ಯೋಗಧ್ಯಾನಕ್ಕೆ ಪ್ರತ್ಯೇಕ ಸಭಾಂಗಣಗಳು ಇರಲಿವೆ. ಜೊತೆಗೆ ಉದ್ಯಾನವನ, ಕಾರಂಜಿ, ಶರಣರ ಕಾಯಕ ಮೂರ್ತಿಗಳು ಇರಲಿವೆ. ತ್ರಿಪುರಾಂತಕ ಕೆರೆಯಲ್ಲಿ ದೋಣಿ ವಿಹಾರದ-ತಾಂತ್ರಿಕ ರೋಬೋಟಿಕ್ಸ್ ವ್ಯವಸ್ಥೆಯಾಗಲಿದೆ. ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿ ಹವಾನಿಯಂತ್ರಣ, ಥೀಮ್ ಟೆರೇಸ್ ಗಾರ್ಡನ್, ಬಯಲು ರಂಗಮಂದಿರ, ಜಲ ಸಂರಕ್ಷಣೆಯ ಅತ್ಯಾಧುನಿಕ ವ್ಯವಸ್ಥೆ ಐತಿಹಾಸಿಕ ಮತ್ತು ಆಧುನಿಕ ಪರಿಕಲ್ಪನೆಗಳ ಹೀಗೆ ೭.೫ ಎಕರೆ ವಿಸ್ತಾರದಲ್ಲಿ ರೂ.೬೦೦ ಕೋಟಿ ಬೃಹತ್ ಯೋಜನೆ ೨ವರ್ಷಗಳಲ್ಲಿ ಪೂರ್ಣಗೊಳ್ಳಲಿದೆ ಎಂದು ಹೇಳಲಾಗುತ್ತದೆ. ಈ ಭವ್ಯ ಮತ್ತು ದಿವ್ಯ ಮಹಾ ಅನುಭವಮಂಟಪ ಅಂತರಾಷ್ಟ್ರೀಯ ಪ್ರಮುಖ ಸಮಾಜೋದ್ಧಾರ್ಮಿಕ ಸಾಂಸ್ಕೃತಿಕ ಕ್ಷೇತ್ರವಾಗಿ ಪ್ರವಾಸಿ ತಾಣವಾಗಿ ಕಂಗೊಳಿಸಲಿದೆ.

●

**ಉತ್ತಮತೇಜಿಗೆ ಚಬುಕಿನಲ್ಲಿ ತೆಗೆವರುಂಟೆ**
**ಪಟ್ಟಣಕ್ಕೆ ಒಡೆಯನಾದ ಬಳಿಕ ಜಾತಿಗೋತ್ರವನರಸಲುಂಟೆ**
**ಪರಮಸುಜ್ಞಾನಿಗೆ ಪ್ರಾಣದ ಹಂಗುಂಟೆ**
**ಲಿಂಗವನಪ್ಪಿದ ಶರಣನ ಕಂಡಕಂಡವರು ಜರಿದಡೆ ಸಂದೇಹವುಂಟೆ**
**ಇಹಲೋಕದವರು ಜರಿದರೆಂದು ವಿಪರೀತಗೊಳಲೇಕೆ**
**ಅಮುಗೇಶ್ವರಲಿಂಗವನರಿದ ಶರಣಂಗೆ**
**ಆರು ಹರಸಿದಡೇನು ಆರು ಹಳಿದಡೇನು.**





# ಕೂಡಲಸಂಗಮ ದೇವರಿಗೆ ಮಾತಾಪಿತೃಗಳುಂಟೇ?

**ಶ್ರೀ ಜಿ.ಹೆಚ್. ಹನ್ನೆರಡುಮಠ**

*# ೫ : "ಮಾವುಮಲ್ಲಿಗೆ"*
*ಇಂದ್ರಪ್ರಸ್ಥ, ಗೊಟ್ಟಿಗೆರೆ ಅಂಚೆ:*
*ಬೆಂಗಳೂರು-೫೬೦೦೮೩*
*೯೯೪೫೭ ೦೧೧೦೮*

**"ಅಯ್ಯಾ ನಿಮ್ಮ ವಂಶಾವಳಿಯಲು**
**ಒಬ್ಬ ತೊತ್ತಿನ ಮಗ ಹುಟ್ಟಿದಾತನ ತೊತ್ತಿನ ಮಗ ನಾನಯ್ಯಾ!**
**ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯಾ!"**

...ಎಂಥ ಅದ್ಭುತ ಲಿಂಗಸಂಬಂಧ ಇದು! ಇಂಥ ತಂದೆ-ಮಕ್ಕಳ ವಂಶಾವಳಿಯ ಅಗಾಧ-ಉತ್ಕಟ-ಅವಿನಾಶಿ-ಅಮೃತ ಸಂಬಂಧ ಕಂಡವನು ಬಸವಣ್ಣ! ನಾವೆಲ್ಲರೂ ಒಂದೇ ಲಿಂಗವಂಶಾವಳಿಯ ಸುಮಧುರ ಮಕ್ಕಳು. ಇದೊಂದು ಹಾಲು-ಜೇನಿನ ಸಂಬಂಧ, ಹೂವು-ದುಂಬಿಯ ಸಂಬಂಧ, ಹಣ್ಣು-ಹಕ್ಕಿಯ ನಲ್ಲೊಲವು!

ನಾವು ಈ ಶಿವಸಂಬಂಧ ವಂಶವೃಕ್ಷದ ಹೆಮ್ಮರದ ಹೂವುಗಳು. ಒಂದೇ ಬಾನಂಗಳದ ಬಾನಾಡಿಗಳು. ಇದು ಬಯಸದೆ ಬಂದ ಸಹಜ ಸೌಭಾಗ್ಯವಲ್ಲವೇ? ಅಂತರಾತ್ಮನ ಈ ಅರುಹಿನ ಸಂಬಂಧಕ್ಕೆ ಕೊಂಕು-ಬಿಂಕಗಳಿಲ್ಲ, ನೆಗ್ಗು-ನುಸಿ ಇಲ್ಲ, ಡೊಂಕು-ಡುಸಿ ಇಲ್ಲ.

ಜಾಗತಿಕ ಧರ್ಮಗಳನೇಕ ಒಬ್ಬೊಬ್ಬ ಮನುಷ್ಯ ಸಂಬಂಧವನ್ನು ನಿಕಟವಾಗಿ ಹೊಂದಿ ಬಂದ ಧರ್ಮಗಳಾದರೆ; ನಮ್ಮದು ಶಿವಸಂಬಂಧ ಹೊಂದಿದ... ಲಿಂಗಸಂಬಂಧ ಪಡೆದ ಸಹಜ ಧರ್ಮ. "ಅಣ್ಣ ತಮ್ಮ ಹೆತ್ತಣ್ಣ ಗೋತ್ರವಾದಡೇನು ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ!" ಅಹಾ... ಇದೆಂಥ ಆತ್ಮಬೆಳುದಿಂಗಳ ಚಂದ್ರಚಲುವಿನ ಚಾರಣ!

ಇದು ಪ್ರಚಾರ ಧರ್ಮವಲ್ಲ... ಆಚಾರಧರ್ಮ. ಮತೀಯ ಚೌಕಟ್ಟು ಹೊಂದಿದ ಜಾತಿ ಧರ್ಮವಲ್ಲ, ಜಾತಿಯನ್ನು ಮೀರಿದ ಜ್ಯೋತಿಧರ್ಮ! ಇಂಥದೊಂದು ಧರ್ಮ ನಮ್ಮದೆಂದು ಹೇಳುವುದೇ ನಮ್ಮೆಲ್ಲರ ಪರಮಪುಣ್ಯ!

ಸಮಸ್ತ ಭಾರತೀಯ ಸಮಾಜವೇ ಧರ್ಮಸತ್ತೆಯ ಮೇಲೆ ಭದ್ರವಾಗಿ ನಿಂತ ಸೌಧ. ಇದನ್ನೇ ಶರಣರು... "ಆಚಾರವೇ ಸ್ವರ್ಗ ಅನಾಚಾರವೇ ನರಕ", "ಸಕಲ ಜೀವಾವಳಿಗೆ ಲೇಸನೆ ಬಯಸುವವನೇ ಶರಣ", "ದಯವೇ ಧರ್ಮದ ಮೂಲವಯ್ಯಾ" ಎಂದು ಎಳೆಯೆಳೆಯಾಗಿ ಬಿಡಿಸಿ ಸಾರಿದರು. ಇಲ್ಲಿ ಅಸಂಬಂಧವೂ ಸಂಬಂಧವೇ. "ಅಸಂಬಂಧ ಸಂಬಂಧವಾಯಿತ್ತು, ಲಿಂಗ ಸಾರಾಯದ ಸನುಮತದಿಂದ!"

ಶರಣರಿಗೆ ಬದುಕು ಮುಖ್ಯ. ಆಡಂಬರ ಅಮುಖ್ಯ. ದುಡಿಮೆಯೆ ಪೂಜೆ. ದೇಹವೇ ದೇವಾಲಯ. ಮನವೇ ಲಿಂಗ. ಕಾಯಕವೇ ಕೈಲಾಸ. ಇದು ಮಂತ್ರದಿಂದ ಕಟ್ಟಿದ ಧರ್ಮವಲ್ಲ. ಮಮತೆಯಿಂದ ಶೃಂಗರಿಸಿದ ಶಿಲ್ಪ! ಇಲ್ಲಿ ಮನುಷ್ಯತ್ವವೇ ಮೃಡತ್ವದಲ್ಲಿ ಅರಳಿದ ಮಾನವೀಯ ಮೌಲ್ಯಗಳ ತಾವರೆಯ ಕೊಳವೇ ಕಂಗೊಳಿಸಿದೆ.

ಜಾಗತಿಕ ಧರ್ಮಗಳಲ್ಲಿಯೇ ವೈಶಿಷ್ಟ್ಯತೆ ಕಾಯ್ದುಕೊಂಡು ಬಂದ ಲಿಂಗಾಯತ ಧರ್ಮದಲ್ಲಿ ತನ್ನ ಒಡಲಾಳದಲ್ಲಿಯೇ ಪರಿವರ್ತನೆ ಪಡೆಯುವ, ಹೊಸ ಓರಣ ಹೊಸ ಉಡುಪು ತೊಟ್ಟುಕೊಳ್ಳಬಲ್ಲ ಪ್ರಗತಿಶೀಲ ಅಧ್ಯಾತ್ಮಿಕ ಸ್ವಾತಂತ್ರ್ಯವಿದೆ. ಇದು ಸ್ಕ್ರೂ-ಮಳೆಯಂತೆ ತಿರುವಿ ಗೋಡೆಗೆ ಕೂಡ್ರಿಸಿದ ಅಲುಗಾಡದ ಫ್ರೇಮು ಅಲ್ಲ. ಇಲ್ಲಿ ಚಿಂತನೆ-ಪ್ರಯೋಗಶೀಲತೆ-ಪರಿವರ್ತನೆಗಳಿಗೆ ನಿರಂತರ ಮನ್ನಣೆಯ ಮಣೆ ಇದೆ. ಇದು ಪ್ರದರ್ಶನ ಪ್ರಧಾನವಾದ ಪ್ರಾಚೀನ ಗುಮ್ಮಟವಲ್ಲ; ನಿತ್ಯನೂತನವಾದ ಕ್ರಿಯಾಶೀಲ ಚೈತನ್ಯ ಕಮ್ಮಟ! ಹೀಗಾಗಿ ಲಿಂಗವಂತ ಧರ್ಮದ ಬುನಾದಿಯಲ್ಲಿ ತೋರಿಕೆಗೆ ಮಾತ್ರ ಕವಲು-ಕೊಂಬು-ರೆಂಬೆ-ಕೊಂಬೆ-ಟೊಂಗೆ-ಟಿಸಿಲು ತೋರಿದರೂ ಅದರಲ್ಲಿ ಚಿಂತನೆಯ ಕಿಡಿ ಇದೆ, ಆತ್ಮ ಸಂಶೋಧನೆಯ ಕಿಚ್ಚು ಇದೆ. ಅಶಿವವನ್ನು ಶಿವವನ್ನಾಗಿ ಪರಿವರ್ತಿಸುವ ನಿತ್ಯ ನೂತನತೆ ಇದೆ.

"ಪರಿವರ್ತನೆ", "ಪಲ್ಲಟ" ಇಲ್ಲದ ಧರ್ಮ ಧರ್ಮವೇ ಅಲ್ಲ. ಇಲ್ಲಿ ಧರ್ಮದ ಚೌಕಟ್ಟು ಮುಖ್ಯವಲ್ಲ; ಜೀವನದ ಚದುರಂಗ ಮುಖ್ಯ. ಯಾವ ಸಿದ್ಧಾಂತವೂ ಪ್ರಥಮ ಜನ್ಮದ ದಿನವೇ ಪರಿಪೂರ್ಣವಾಗಿ ಶಿಖರ ತಲುಪಿರಲಾರದು. ಕಾಲಧರ್ಮ- ಯುಗಧರ್ಮಗಳ ವೈಪರೀತ್ಯ- ವೈರುಧ್ಯಗಳೊಂದಿಗೆ ಸಂಘರ್ಷಗೊಂಡು ಸಮಪಾಕವಾದಾಗ ಪರಿಷ್ಕೃತ ಸತ್ಯದ ಪರಮೋತ್ಕೃಷ್ಟತೆ ಲಭ್ಯವಾಗುತ್ತದೆ.

ವೀರಶೈವ-ಲಿಂಗಾಯತ ನಿಲುವಿನಲ್ಲಿ ಇತಿಹಾಸದುದ್ದಕ್ಕೂ ಮೈನವಿರೇಳುವ ವಿಭಿನ್ನ ಬದಲಾವಣೆಗಳು, ಸಿದ್ಧಾಂತದ ಪುನರ್ ನವೀಕರಣಗಳು, ಸಾಮಾಜಿಕ ಕ್ರಾಂತಿಗಳು ನಿರಂತರವಾಗಿ ನಡೆದುಬಂದಿವೆ ಎಂಬುದನ್ನು ಇಲ್ಲಿ ಗಮನಿಸಿದರೆ ದಂಗುದಕ್ಕಾಗುತ್ತೇವೆ. ಉದಾಹರಣೆಗೆ-

[೧] ಶೈವಮೂಲದ ಆರಾಧ್ಯದೇವನೆ ಶಿವ. ಈತ ಪಾರ್ವತಿ ಪತಿಯೂ ಷಣ್ಮುಖ-ಗಣಪರ ತಂದೆಯೂ, ನಂದಿವಾಹನನೂ -ಗಜಚರ್ಮಾಂಬರಧಾರಿಯೂ ತ್ರಿಶೂಲ-ಢಮರುಗ-ಧಾರಿಯೂ- ಸ್ಮಶಾನವಾಸಿಯೂ ಆದ "ಶಂಕರ"! ಇವನೇ ಈ ವಾಹಿನಿಯ ಆಗಮೋಕ್ತ ಮೂಲಪುರುಷ. ಈ ಪೌರಾಣಿಕ ಪರಿಕಲ್ಪನೆಗೆ ಜ್ಞಾನಾಗ್ನಿಯನ್ನು ಹೊಚ್ಚಿ; ಅಕಾಯನೂ - ಅಜನ್ಮನೂ-ಮೃತ್ಯುಂಜಯನೂ-ಅನಾದ್ಯನಂತನೂ-ಪರಂಜ್ಯೋತಿ ಸ್ವರೂಪನೂ ಆದ ಶಿವಪರಮಾತ್ಮನ, "ಲಿಂಗತತ್ತ್ವ"ದ ಪರಿಷ್ಕೃತ ಪರಿಕಲ್ಪನೆ ಸಿದ್ಧವಾದದ್ದು ಜಗತ್ತಿನ ವಾಙ್ಮಯೇತಿಹಾದಲ್ಲಿಯೇ ಒಂದು ಬಹುದೊಡ್ಡ ಕ್ರಾಂತಿ. ಇದೆಲ್ಲಾ ನಡೆದದ್ದು ಶೈವ-ವೀರಶೈವ-ಲಿಂಗವಂತ-ಬಸವತತ್ವಗಳ ಸಾಗರದಾಳದಲ್ಲಿ ನಡೆದ ಪ್ರಯೋಗ ಶಾಲೆಯಲ್ಲಿ!

[೨] ಸ್ಥಾವರ ಪೂಜೆಯಿಂದ ಮಡುಗಟ್ಟಿದ ಜಡಸಂಸ್ಕೃತಿ, ದೇವ-ಭಕ್ತರ ಮಧ್ಯೆ ಜೇಡೆಕಟ್ಟಿದ ಪೂಜಾರಿ ಪ್ರವೃತ್ತಿ, ಧರ್ಮದ ವ್ಯಾಪಾರೀಕರಣ, ಮೂಢನಂಬಿಕೆಗಳ ಅವೈಜ್ಞಾನಿಕ ಮಾರ್ಗ, ಧನದಾಹಿಗಳ ಹಪಾಹಪಿ, ಜಾತ್ಯಂಧತೆ ಸರಮಾಲೆಗಟ್ಟಿ ಸೃಷ್ಟಿಯಾದಾಗ "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ" ಎಂಬ ವಿನೂತನ ಪ್ರಸ್ಥಾನವನ್ನು ಪ್ರತಿಷ್ಠಾಪಿಸಿದ ಏಕೈಕ ಕ್ರಾಂತಿಕಾರಕ ವಿಶ್ವಧರ್ಮ ಇದು. ಜಡದಿಂದ ಜಂಗಮಕ್ಕೆ ಈ ಯೋಗಸಂಸ್ಥೆಯ ನಿರಂತರ ಚಾರಣ ಅನುಪಮ! ಅದ್ವಿತೀಯ!! ವೀರಶೈವವು ಹೀಗೆ ನಿತ್ಯ ವಿಕಾಸಶೀಲ ನಿರಂತರ ಚಲನಶೀಲ ಎಚ್ಚತ್ತ ವಾಹಿನಿ. ಕತ್ತಲೆಯಿಂದ ಬೆಳಕಿಗೆ ಸಾಗಿಬಂದ ಯುಗಯುಗಾಂತರದ ನಂದಿನಿ! ಇದರಲ್ಲಿ ಭೂತದ ಬೇರಿದೆ, ವರ್ತಮಾನದ ಪುರುಷಾರ್ಥವಿದೆ, ಭವಿಷ್ಯದ ಸಮಗ್ರ ಪರಿವರ್ತನೆಯ ಪರಮ ಗುರಿ ಇದೆ!

●

**ಮುಂದಿನ ಸಂಚಿಕೆಯಲ್ಲಿ ಮುಂದುವರೆಯುತ್ತದೆ**

















## ಕ್ಷೇತ್ರ ವಾರ್ತೆಗಳು



### ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು

ಇಂಡಿ: ತಾಲೂಕು ಮಟ್ಟದ ಪ್ರಥಮ ಮಹಿಳಾ ಸಮಾವೇಶ, ದಿನಾಂಕ ೮.೧.೨೦೨೧

ದಿವ್ಯ ಸಾನ್ನಿಧ್ಯ: ಪರಮಪೂಜ್ಯ ಶ್ರೀ ಡಾ. ಸ್ವರೂಪಾನಂದ ಸ್ವಾಮೀಜಿ, ಸರ್ವಾಧ್ಯಕ್ಷರು: ಪರಮಪೂಜ್ಯನೀಯ ಮಾತಾ ವಚನಶ್ರೀ ತಾಯಿಯವರು, ಅಧ್ಯಕ್ಷರು: ಗಂಗಾಬಾಯಿ ಚಂ. ಗಲಗಲಿ, ವೇದಿಕೆಯಲ್ಲಿ: ಡಾ. ಉಷಾದೇವಿ ಹಿರೇಮಠ, ಜಂಬುನಾಥ ಕಂಚ್ಯಾಣಿ, ವಿಜಯಲಕ್ಷ್ಮಿ ದೇಸಾಯಿ, ಆರ್.ವಿ. ಪಾಟೀಲ

### ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು

ಭದ್ರಾವತಿ: ಲಿಂ.ಬಿ.ಸಿ. ನಾಗರತ್ನಮ್ಮ ಸ್ಮರಣಾರ್ಥ ದತ್ತಿ ಮತ್ತು ಶರಣೆ ಸುಶೀಲಮ್ಮ ಗುರುಸಿದ್ದಪ್ಪ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೧೬.೧೨.೨೦೨೦

ವೇದಿಕೆಯಲ್ಲಿ: ಹೇಮಾವತಿ, ಗಂಗಾ ಕುಬಸದ್, ಡಾ. ಕೆ.ಟಿ. ಪಾರ್ವತಮ್ಮ, ಹೆಚ್.ಎನ್. ಮಹಾರುದ್ರ, ಕತ್ತಲಗೆರೆ ತಿಮ್ಮಪ್ಪ





### ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು

ಚನ್ನಗಿರಿ: ಲಿಂ. ಮಠದ ಪಾರ್ವತಮ್ಮ, ಲಿಂ. ಎಮ್. ಎಸ್. ಬಸವರಾಜಯ್ಯ ದತ್ತಿ, ಲಿಂ. ಬಸಮ್ಮ, ಲಿಂ. ಮಠದ ಮಲ್ಲಯ್ಯ ತಿಪ್ಪಗೊಂಡನಹಳ್ಳಿ ದತ್ತಿ, ಸುಣಿಗೆರೆ ಶಿವಲಿಂಗಮ್ಮ ಗೌಡ್ರ ಮಹಾದೇವಪ್ಪ ದತ್ತಿ, ಲಿಂ. ಮಲ್ಲಿಗೆರೆ ಮಹಾದೇವಪ್ಪ ಮತ್ತು ಲಿಂ. ಗೌರಮ್ಮ ಮತ್ತು ಮಕ್ಕಳು ದತ್ತಿ, ದಿನಾಂಕ: ೨೨.೧.೨೦೨೧

ವೇದಿಕೆಯಲ್ಲಿ: ಎಂ. ಯು. ಚನ್ನಬಸಪ್ಪ, ಚನ್ನಸ್ವಾಮಿ, ಕೆ.ಪಿ. ದೇವೇಂದ್ರಯ್ಯ, ಆರ್. ಶಿವಮೂರ್ತಿ, ಚಿಕ್ಕೊಳ್ ಈಶ್ವರಪ್ಪ, ಎಂ. ಶಂಕರಯ್ಯ, ಹೆಚ್. ಎಸ್. ಮಲ್ಲಿಕಾರ್ಜುನಪ್ಪ

### ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು

ಕದಳಿ ಮಹಿಳಾ ವೇದಿಕೆ, ತುಮಕೂರು: ಶ್ರೀ ಸಿದ್ಧರಾಮೇಶ್ವರ ಜಯಂತಿ ಆಚರಣೆ, ದಿನಾಂಕ: ೧೬.೧.೨೦೨೧. ವೇದಿಕೆಯಲ್ಲಿ: ನಾಗರತ್ನ ಚಂದ್ರಪ್ಪ, ಶಿವಲಿಂಗಮ್ಮ, ಸುಮಾ, ಗಿರಿಜಾ, ಬೆಟ್ಟದ ಹಳ್ಳಿ ಗವಿ ಮಠಾಧೀಶರಾದ ಶ್ರೀ ಚಂದ್ರಶೇಖರ ಸ್ವಾಮೀಜಿ, ಕೋ ರಂ. ಬಸವರಾಜು, ಎಂ. ಜಿ. ಸಿದ್ದರಾಮಯ್ಯನವರು

ಕದಳಿ ಶ್ರೀ ಪ್ರಶಸ್ತಿ ಪುರಸ್ಕೃತರು: ಲೋಕೇಶ್ವರಿ ಪ್ರಭು



Magazine Registration No. RNI 68294/97
"REGISTERED" Postal Registration No. RNP/KA/BGS/167/2021-2023
Licensed to post without Pre Payment, License No:- PMG/BG/WPP/119/2021-2023
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine
Date of Publication 1 February 2021
Total Pages 68 (Include Cover Pages)

ಬೆಂಗಳೂರು: ಜರಗನಹಳ್ಳಿ ಸಿದ್ದಮ್ಮ ನಂಜುಂಡಪ್ಪ ಶರಣ ದತ್ತಿ ಪ್ರಶಸ್ತಿ ಮತ್ತು ಸಿ. ವತ್ಸಲ ಮತ್ತು ಎಂ. ನಂಜುಂಡಯ್ಯ ಶರಣ ದತ್ತಿ ಪ್ರಶಸ್ತಿ ಪ್ರದಾನ ಸಮಾರಂಭ, ದಿನಾಂಕ: ೩೦.೧೨.೨೦೨೦
ಪ್ರಶಸ್ತಿ ಪುರಸ್ಕೃತರು: ಸ. ರಘುನಾಥ, ಸುಶೀಲಾ ಸೋಮಶೇಖರ್, ರುದ್ರಮ್ಮ ಅಮರೇಶ ಹಾಸಿನಾಳ
ವೇದಿಕೆಯಲ್ಲಿ: ಹೆಚ್.ಎಸ್. ವೆಂಕಟೇಶಮೂರ್ತಿ ಗೊ.ರು. ಚನ್ನಬಸಪ್ಪ, ಜರಗನಹಳ್ಳಿ ಶಿವಶಂಕರ್ ಮತ್ತು ದತ್ತಿ ದಾನಿಗಳು





ಹಾನಗಲ್ಲ: ಮಹಾಶರಣ ಮಾಗನೂರು ಬಸಪ್ಪ ಮತ್ತು ಶರಣೆ ಸರ್ವಮಂಗಳಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೧೭.೦೧.೨೦೨೧, ವೇದಿಕೆಯಲ್ಲಿ: ನ್ಯಾಯವಾದಿ ಕೆ.ಜಿ. ಸವದತ್ತಿ, ಮಾರುತಿ ಶಿಡ್ಲಾಪೂರ, ನ್ಯಾಯವಾದಿ ರವಿಬಾಬು ಪೂಜಾರ್, ನಿರಂಜನ ಗುಡಿ, ಬಿ.ಎಂ. ಬೇವಿನಮರದ, ಶಿವಗಂಗಕ್ಕ ಪಟ್ಟಣದ, ಅಕ್ಕಮ್ಮ ಕುಂಬಾರಿ, ರಂಜಾನ್ ಖಿಲ್ಲೇದಾರ್

## ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು

ಮುದ್ದೇಬಿಹಾಳ: ಲಿಂ. ಪರಮಾನಂದ ಸಂ. ಮಸ್ಕಿ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೧೨.೧೨.೨೦೨೦
ವೇದಿಕೆಯಲ್ಲಿ: ಮಹಾದೇವಿ ಮಸ್ಕಿ, ಬಸವರಾಜ ನಾಲತವಾಡ, ಎಸ್.ಎನ್.ಕಂಗಳ, ರುದ್ರೇಶ್ ಕಿತ್ತೂರ, ಪ್ರಭುಲಿಂಗ ಶಿ. ಕಡಿ, ಬಸವರಾಜ ಸುಕಾಲಿ.



ಶ್ರೀ ಬಿ. ನಾಗರಾಜ C/o ಟಿ. ನಟರಾಜ
ಎಫ್.ಟಿ.ಐ. ಕ್ಯಾಂಪಸ್ ಔಟರ್ ರಿಂಗ್ ರೋಡ್
ಬೆಂಗಳೂರು – 560 022
90361 80637

Published by: Go.Ru. Channabasappa,
Akhila Bharatha Sharana Sahitya Parishat (Regd.)
Shivarathreeshwara Circle, 1st Main, 8th Block,
Jayanagar, Bengaluru - 560 070
Printed at : Sathyasri Printers Pvt Ltd., No. 16/1,
3rd Cross, 2nd Main Road, Kasturiba Nagar
Bengaluru-560 026
Editor : Dr. M.S. Ashadevi